KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೧, ೨೦೦೮ (ಭಾದ್ರಪದ ೨೦, ಶಕ ವರ್ಷ ೧೯೩೦) | ಸಂಚಿಕೆ ೩೭ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಮುಂದುವರಿಸುತ್ತಿರುವ ತಾಂತ್ರಿಕ ಹುದ್ದೆಗಳನ್ನು ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್ 470 ಎಸ್ ಜಿಓ 82 ದಿನಾಂಕ:1–9–1982
2) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 33 ಸಸಿವಿ 96 ದಿನಾಂಕ:24.2.1998
3) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 1 ಸಸಿವಿ ದಿನಾಂಕ:23.4.2001
4) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 40 ಸಸಿವಿ 01 ದಿನಾಂಕ:19–11–2001
5) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 89 ಸಸಿವಿ 05 ದಿನಾಂಕ:13.1.2006
6) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 101 ಸಸಿವಿ 06 ದಿನಾಂಕ:18–01–2007
7) ಅನಧಿಕೃತ ಟಿಪ್ಪಣಿ ಸಂಖ್ಯೆ:127 ಎಂಎಂಕೆ 07 ದಿನಾಂಕ:26.2.2008 ಹಾಗೂ 1.3.2008

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯ ತಾಂತ್ರಿಕ ಶಾಖೆಗಳಲ್ಲಿ ಈ ಕೆಳಕಂಡ ಹುದ್ದೆಗಳನ್ನು ತಾತ್ಕಲಿಕವಾಗಿ ಸೃಜಿಸಲಾಗಿದ್ದು, ಸದರಿ ಹುದ್ದೆಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ:2 ರಿಂದ 6 ರವರೆಗಿನ ಆದೇಶಗಳಲ್ಲಿ ವರ್ಷದಿಂದ ವರ್ಷಕ್ಕೆ ಮುಂದುವರಿಸಲಾಗಿತ್ತು.

| ಕ್ರ.ಸಂ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | 1) ಸರ್ಕಾರದ ಉಪಕಾರ್ಯದರ್ಶಿ (ಬೃಹತ್ ಮತ್ತು ಮಧ್ಯಮ ಯೋಜನೆಗಳು) ಜಲಸಂಪನ್ಮೂಲ ಇಲಾಖೆ | 1 |
| | 2) ಶೀಘ್ರಲಿಪಿಗಾರ | 1 |
| | 3) ಕಿರಿಯ ಸಹಾಯಕ | 1 |
| | 4) ದಲಾಯತ್ | 1 |
| | ಒಟ್ಟು | 4 |

| | | |
|---|---|---|
| 2 | **ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ–3** | |
| | 1) ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) | 1 |
| | 2) ಶಾಖಾಧಿಕಾರಿ | 1 |
| | 3) ಹಿರಿಯ ಸಹಾಯಕರು | 2 |
| | 4) ಸಹಾಯಕರು | 1 |
| | 5) ಶೀಘ್ರಲಿಪಿಗಾರ | 1 |
| | 6) ಕಿರಿಯ ಸಹಾಯಕ | 1 |
| | 7) ಬೆರಳಚ್ಚುಗಾರ | 1 |
| | 8) ದಲಾಯತ್ | 1 |
| | **ಒಟ್ಟು** | 9 |
| 3 | **ವಿಶ್ವಬ್ಯಾಂಕ್ ಶಾಖೆ** | |
| | 1) ಸರ್ಕಾರದ ಅಧೀನ ಕಾರ್ಯದರ್ಶಿ (ವಿಶ್ವಬ್ಯಾಂಕ್) | 1 |
| | 2) ಶಾಖಾಧಿಕಾರಿ | 1 |
| | 3) ಹಿರಿಯ ಸಹಾಯಕ | 1 |
| | 4) ಸಹಾಯಕರು | 1 |
| | 5) ಶೀಘ್ರಲಿಪಿಗಾರ | 1 |
| | 6) ಕಿರಿಯ ಸಹಾಯಕ | 1 |
| | 7) ಬೆರಳಚ್ಚುಗಾರ | 1 |
| | 8) ದಲಾಯತ್ | 1 |
| | **ಒಟ್ಟು** | 8 |

ಆ ತರುವಾಯ ಮೇಲಿನ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರಿಸಲ್ಪಟ್ಟು ಅಂತಿಮವಾಗಿ ಮೇಲೆ (6) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ದಿನಾಂಕ:31–12–2007ರವರೆಗೆ ಮುಂದುವರಿಸಲಾಗಿದ್ದು, ಸದರಿ ಹುದ್ದೆಗಳನ್ನು ಮುಂದುವರಿಸುವಂತೆ ಮೇಲೆ (7)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಗಳಲ್ಲಿ ಜಲಸಂಪನ್ಮೂಲ ಇಲಾಖೆಯು ಕೋರಿದೆ ಅದರಂತೆ ಸರ್ಕಾರವು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 33 ಸಅಸೇ 2008 ಬೆಂಗಳೂರು, ದಿನಾಂಕ:11ನೇ ಜೂನ್ 2008**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಮುಂದುವರಿಯುತ್ತಿರುವ ಈ ಕೆಳಕಂಡ ತಾಂತ್ರಿಕ ಹುದ್ದೆಗಳನ್ನು ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:1.1.2008 ರಿಂದ 31.12.2008 ರವರೆಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ.ಸಂ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | 1) ಸರ್ಕಾರದ ಉಪಕಾರ್ಯದರ್ಶಿ (ಬೃಹತ್ ಮತ್ತು ಮಧ್ಯಮ ಯೋಜನೆಗಳು) ಜಲಸಂಪನ್ಮೂಲ ಇಲಾಖೆ | 1 |
| | 2) ಶೀಘ್ರಲಿಪಿಗಾರ | 1 |
| | 3) ಕಿರಿಯ ಸಹಾಯಕ | 1 |
| | 4) ದಲಾಯತ್ | 1 |
| | **ಒಟ್ಟು** | 4 |
| 2 | **ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ–3** | |
| | 1) ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) | 1 |
| | 2) ಶಾಖಾಧಿಕಾರಿ | 1 |
| | 3) ಹಿರಿಯ ಸಹಾಯಕ | 2 |
| | 4) ಸಹಾಯಕರು | 1 |
| | 5) ಶೀಘ್ರಲಿಪಿಗಾರ | 1 |
| | 6) ಕಿರಿಯ ಸಹಾಯಕ | 1 |

| | | |
|---|---|---|
| | 7) ಬೆರಳಚ್ಚುಗಾರ | 1 |
| | 8) ದಲಾಯತ್ | 1 |
| | **ಒಟ್ಟು** | 9 |
| 3 | **ವಿಶ್ವಬ್ಯಾಂಕ್ ಶಾಖೆ** | |
| | 1) ಸರ್ಕಾರದ ಅಧೀನ ಕಾರ್ಯದರ್ಶಿ (ವಿಶ್ವಬ್ಯಾಂಕ್) | 1 |
| | 2) ಶಾಖಾಧಿಕಾರಿ | 1 |
| | 3) ಹಿರಿಯ ಸಹಾಯಕ | 1 |
| | 4) ಸಹಾಯಕರು | 1 |
| | 5) ಶೀಘ್ರಲಿಪಿಗಾರ | 1 |
| | 6) ಕಿರಿಯ ಸಹಾಯಕ | 1 |
| | 7) ಬೆರಳಚ್ಚುಗಾರ | 1 |
| | 8) ದಲಾಯತ್ | 1 |
| | **ಒಟ್ಟು** | 8 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10–7–1996 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 945

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಜನಸ್ಪಂದನ ಕೋಶ) ಪ್ರಧಾನ ಕಾರ್ಯದರ್ಶಿ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 51 ಸಸಿವಿ 03 ದಿನಾಂಕ:17.6.2003

2) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 51 ಸಸಿವಿ 03 ದಿನಾಂಕ:23.12.2003

3) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 24 ಸಸಿವಿ 06 ದಿನಾಂಕ:20.3.2006

4) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 30 ಸಸಿವಿ 07 ದಿನಾಂಕ:21–05–2007

5) ಪ್ರಧಾನ ಕಾರ್ಯದರ್ಶಿ ಸಿಆಸುಇ (ಜನಸ್ಪಂದನ) ಇವರ ಪತ್ರ ಸಂಖ್ಯೆ:ಡಿಪಿಎಆರ್/ಪಿಎಸ್/ಜೆಎಸ್/09–08 ದಿನಾಂಕ:3–1–2008

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪ್ರಧಾನ ಕಾರ್ಯದರ್ಶಿ (ಸಾರ್ವಜನಿಕ ದೂರುಗಳು) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಎರಡು ವರ್ಷಗಳ ಅವಧಿಗೆ ಸೃಜಿಸಲಾಗಿದೆ.

| ಕ್ರ.ಸಂ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ ಗ್ರೇಡ್–2/ಪತ್ರಾಂಕಿತ ಆಪ್ತ ಸಹಾಯಕ | 1 ಹುದ್ದೆ |
| 2 | ಪತ್ರಾಂಕಿತ ಆಪ್ತ ಸಹಾಯಕ/ಹಿರಿಯ ಶೀಘ್ರಲಿಪಿಗಾರ | 1 ಹುದ್ದೆ |
| 3 | ಶಾಖಾಧಿಕಾರಿ/ಹಿರಿಯ ಸಹಾಯಕ | 1 ಹುದ್ದೆ |
| 4 | ದಲಾಯತ್ | 2 ಹುದ್ದೆಗಳು |
| 5 | ವಾಹನ ಚಾಲಕ | 1 ಹುದ್ದೆ |

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ.

| ಕ್ರ.ಸಂ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರರು | 2 ಹುದ್ದೆಗಳು |
| 2 | ಕಿರಿಯ ಸಹಾಯಕ | 1 ಹುದ್ದೆ |

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ದಿನಾಂಕ:26.5.2006 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿತ್ತು ಮೇಲೆ (4)ರ ಸರ್ಕಾರಿ ಆದೇಶದಲ್ಲಿ ಶೀಘ್ರಲಿಪಿಗಾರರ ಒಂದು ಹುದ್ದೆಯೊಂದಿಗೆ ಇನ್ನುಳಿದ ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ಮುಂದುವರಿಸುತ್ತಾ ಬರಲಾಗಿದ್ದು, ಸದರಿ ಹುದ್ದೆಗಳ ಮುಂದುವರಿಕೆಯು ದಿನಾಂಕ:25.5.2008ಕ್ಕೆ ಮುಕ್ತಾಯವಾಗಿದ್ದರಿಂದ ಈ ಹುದ್ದೆಗಳನ್ನು ಎರಡು ವರ್ಷಗಳ ಅವಧಿಗೆ ಮುಂದುವರಿಸುವಂತೆ ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಪ್ರಧಾನ ಕಾರ್ಯದರ್ಶಿ (ಜನಸ್ಪಂದನ) ಅವರು ಕೋರಿದ್ದಾರೆ. ಅದರಂತೆ ಸರ್ಕಾರವು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ :ಸಿಆಸುಇ 543 ಸಅಸೇ 2007 ಬೆಂಗಳೂರು, ದಿನಾಂಕ:11ನೇ ಜೂನ್ 2008**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಪ್ರಧಾನ ಕಾರ್ಯದರ್ಶಿ (ಜನಸ್ಪಂದನ ಕೋಶ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:26.5.2008 ರಿಂದ ಎರಡು ವರ್ಷಗಳ ಅವದಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ.ಸಂ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ ಗ್ರೇಡ್–2/ಪತ್ರಾಂಕಿತ ಆಪ್ತ ಸಹಾಯಕ | 1 ಹುದ್ದೆ |
| 2 | ಪತ್ರಾಂಕಿತ ಆಪ್ತ ಸಹಾಯಕ/ಹಿರಿಯ ಶೀಘ್ರಲಿಪಿಗಾರ | 1 ಹುದ್ದೆ |
| 3 | ಶಾಖಾಧಿಕಾರಿ/ಹಿರಿಯ ಸಹಾಯಕ | 1 ಹುದ್ದೆ |
| 4 | ಶೀಘ್ರಲಿಪಿಗಾರರು | 1 ಹುದ್ದೆ |
| 5 | ಕಿರಿಯ ಸಹಾಯಕ | 1 ಹುದ್ದೆ |
| 6 | ದಲಾಯತ್ | 2 ಹುದ್ದೆಗಳು |
| 7 | ವಾಹನ ಚಾಲಕ | 1 ಹುದ್ದೆ |

ಈ ಆದೇಶದವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10–7–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 946

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಫ್.ಎ. ನೂರ್, ಸರ್ಕಾರಿ ಅಭಿಯೋಜಕರು, ಬೀದರ್ ಇವರ ವಿರುದ್ಧದ ಆರೋಪಗಳ ಬಗ್ಗೆ ಮಾಡಿರುವ ಇಲಾಖಾ ವಿಚಾರಣೆ ಅಂತಿಮ ಆದೇಶ ಹೊರಡಿಸುವ ಬಗ್ಗೆ

**ಓದಲಾಗಿದೆ:**
1. ಕಾರಣ ಕೇಳುವ ನೋಟೀಸು ಸಂಖ್ಯೆ ಲಾ 152 ಪಿಪಿಇ 2000 ದಿನಾಂಕ:26.3.2001
2. ಶ್ರೀ ಎಫ್.ಎ. ನೂರ್ ಇವರ ಪ್ರತಿವಾದದ ಲಿಖಿತ ಹೇಳಿಕೆ ದಿನಾಂಕ:16.4.2001
3. ಸರ್ಕಾರಿ ಆದೇಶ ಸಂಖ್ಯೆ ಲಾ 152 ಪಿಪಿಇ 2000 ದಿನಾಂಕ:25.5.2001 ಮತ್ತು 25.7.2001
4. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ:18.9.2001
5. ಸಕಾರದ ಪತ್ರ ಸಂ.ಒಇ 2040 HCP2/2008 ದಿನಾಂಕ:2.4.08

**ಪ್ರಸ್ತಾವನೆ:**

ಶ್ರೀ ಎಫ್.ಎ. ನೂರ್, ಸರ್ಕಾರಿ ಅಭಿಯೋಜಕರು ಇವರು ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಇಲ್ಲಿ ನಿಯೋಜನೆಯ ಮೇಲೆ ಕಾನೂನು ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರ ಮೇಲೆ ವಿಲ್ಸನ್ ಗಾರ್ಡನ್ ಆರಕ್ಷಕ ಠಾಣೆಯಲ್ಲಿ ಮೊಕದ್ದಮೆ ಸಂ:384/2000 ದಾಖಲಾದ ಬಗ್ಗೆ ಮೇಲೆ ಕ್ರಮಾಂಕ (1)ರಲ್ಲಿ ಓದಲಾಗಿರುವ ಕಾರಣ ಕೇಳುವ ತಿಳುವಳಿಕೆ ಪತ್ರವನ್ನು ದಿನಾಂಕ:26.3.2001 ರಂದು ಜಾರಿ ಮಾಡಲಾಗಿತ್ತು.

ಮೇಲೆ ಕ್ರಮಾಂಕ (2) ರಲ್ಲಿ ಓದಲಾಗಿರುವ ದಿನಾಂಕ:16.4.2001ರಲ್ಲಿ ಆರೋಪಿತ ಸರ್ಕಾರಿ ಅಧಿಕಾರಿ ಶ್ರೀ ಎಫ್.ಎ. ನೂರ್ ಇವರು ತಮ್ಮ ಲಿಖಿತ ಪ್ರತಿವಾದದ ಹೇಳಿಕೆಯಲ್ಲಿ ಅವರ ಮೇಲೆ ಮಾಡಿರುವ ಆರೋಪಗಳನ್ನು ಸ್ಪಷ್ಟವಾಗಿ ನಿರಾಕರಿಸಿದ್ದರು.

ಮೇಲೆ ಕ್ರಮಾಂಕ(3)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶಗಳಲ್ಲಿ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಮಾಡಲಾಗಿರುವ ಆರೋಪಗಳ ಸತ್ಯಾಸತ್ಯತೆಯ ಬಗ್ಗೆ ತಿಳಿಯಲು ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರ ಉಪ ನಿಯಮ (2)ರನ್ವಯ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶ ಸಂಖ್ಯೆ ಸಿಆಸುಇ 3 ಸೇಇಎ 96 ದಿನಾಂಕ:24.4.98 ರನ್ವಯ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯನ್ನು ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರು ಮೇಲೆ ಕ್ರಮಾಂಕ (4)ರಲ್ಲಿ ಓದಲಾಗಿರುವ ತಮ್ಮ ವರದಿಯಲ್ಲಿ ಆರೋಪಿತ ಅಧಿಕಾರಿಯ ಮೇಲೆ ಮಾಡಲಾದ ದೋಷಾರೋಪಣೆಗಳನ್ನು ಸಾಬೀತುಪಡಿಸುವಲ್ಲಿ ಶೀಸ್ತು ಪ್ರಾಧಿಕಾರವು ವಿಫಲಗೊಂಡಿದೆ. ಆದ್ದರಿಂದ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಮಾಡಲಾದ ಆಪಾದನೆಗಳು ಸಾಭೀತಾಗಿಲ್ಲವೆಂಬುದಾಗಿ ನಿರ್ಧರಿಸಿದ್ದಾರೆ.

ಆರೋಪಿತ ಅಧಿಕಾರಿಯ ಮೇಲೆ ಹೂಡಲಾಗಿದ್ದ ಮೇಲ್ಕಂಡ ಮೊಕದ್ದಮೆಯ ಸಂಬಂಧದ ಸಿ.ಸಿ.14862/2000 ಪ್ರಕರಣದಿಂದ ಆರೋಪಿತ ಅಧಿಕಾರಿಯನ್ನು ಆರೋಪ ಮುಕ್ತಗೊಳಿಸಿದ್ದು ಮೇಲೆ ಕ್ರಮಾಂಕ (5)ರಲ್ಲಿ ಓದಲಾಗಿರುವ ಸರ್ಕಾರದ ಪತ್ರದಲ್ಲಿ ಸದರಿ ತೀರ್ಪಿನ ಮೇಲೆ ಮೇಲ್ಮನವಿ ಸಲ್ಲಿಸಬಾರದೆಂದು ತೀರ್ಮಾನಿಸಲಾಗಿದೆ,

ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 930 ಪಿಪಿಇ 2005, ಬೆಂಗಳೂರು, ದಿನಾಂಕ:12ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಎಫ್.ಎ. ನೂರ್ ಸರ್ಕಾರಿ ಅಭಿಯೋಜಕರು, ಬೀದರ್ ಅವರನ್ನು ಕ್ರಮಾಂಕ ಲಾ 152 ಪಿಪಿಇ 200 ದಿನಾಂಕ:26.3.2001ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಈ ಮೂಲಕ ಆರೋಪ ಮುಕ್ತಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 948

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾ ಮತ್ತು ಸು ಕಾಫಿಪೋಸ ಮತ್ತು ಅಭಿಯೋಗ)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರದ ಆರ್ಥಿಕ ಸಲಹೆಗಾರರ ಹುದ್ದೆಯಾದ ಉಪ ನಿಯಂತ್ರಕರು ಹುದ್ದೆಯನ್ನು ಜಂಟಿ ನಿಯಂತ್ರಕರು ಎಂದು ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:**
1. ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರದ ಆಡಳಿತ ಮಂಡಳಿಯ ಸಭೆಯ ನಡವಳಿ ದಿನಾಂಕ:13.9.2007
2 ನಿರ್ದೇಶಕರು, ಶ್ರೀ ಜಯದೇವ, ಹೃದ್ರೋಗ ಚಿಕಿತ್ಸಾ ಕೇಂದ್ರ ಬೆಂಗಳೂರು ಇವರ ಪತ್ರ ದಿನಾಂಕ:16.4.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)–ರಲ್ಲಿ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರದ ಆಡಳಿತ ಮಂಡಳಿಯ ಸಭೆಯಲ್ಲಿ, ಸದರಿ ಸಂಸ್ಥೆಯಲ್ಲಿರುವ ಆರ್ಥಿಕ ಸಲಹೆಗಾರರ ಹುದ್ದೆಯಾದ ಉಪ ನಿಯಂತ್ರಕರು ಹುದ್ದೆಯನ್ನು ಜಂಟಿ ನಿಯಂತ್ರಕರು ಹುದ್ದೆಗೆ ಮೇಲ್ದರ್ಜೆಗೇರಿಸಲು ಅನುಮತಿಸಿ ನಿರ್ಣಯವನ್ನು ಕೈಗೊಳ್ಳಲಾಗಿದೆ.

ಮೇಲೆ ಓದಲಾದ ಕ್ರ.ಸಂ (2)ರಲ್ಲಿ ನಿರ್ದೇಶಕರು, ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆ, ಬೆಂಗಳೂರು ಇವರ ದಿನಾಂಕ:16.4.2008 ರ ಪತ್ರದಲ್ಲಿ, ದಿನಾಂಕ:13.9.2007 ರಲ್ಲಿ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರದ ಆಡಳಿತ ಮಂಡಳಿಯ ಸಭೆಯಲ್ಲಿ (Governing Council Meeting) ತೆಗೆದುಕೊಂಡ ನಿರ್ಣಯದಂತೆ ಆರ್ಥಿಕ ಸಲಹೆಗಾರರ ಹುದ್ದೆಯಾದ ಉಪ ನಿಯಂತ್ರಕರು ಹುದ್ದೆಯನ್ನು ಜಂಟಿ ನಿಯಂತ್ರಕರ ಹುದ್ದೆಗೆ ಮೇಲ್ದರ್ಜೇಗೇರಿಸಿ ಆದೇಶ ಹೊರಡಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದುದರಿಂದ, ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರದಲ್ಲಿನ ಆರ್ಥಿಕ ಸಲಹೆಗಾರರ ಹುದ್ದೆಯಾದ ಉಪ ನಿಯಂತ್ರಕರು ಹುದ್ದೆಯನ್ನು ಜಂಟಿ ನಿಯಂತ್ರಕರ ಹುದ್ದೆಗೆ ಆಡಳಿತ ಮಂಡಳಿಯ ಸಭೆ ದಿನಾಂಕ:13.9.2007 ರಲ್ಲಿ ತೆಗೆದುಕೊಂಡ ನಿರ್ಣಯದಂತೆ ಹುದ್ದೆಯನ್ನು ಮೇಲ್ದರ್ಜೆಗೇರಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 142 ಪಿಟಿಡಿ 2008, ಬೆಂಗಳೂರು, ದಿನಾಂಕ:12ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರದಲ್ಲಿನ ಆರ್ಥಿಕ ಸಲಹೆಗಾರರ ಹುದ್ದೆಯಾದ "ಉಪ ನಿಯಂತ್ರಕರು" ಹುದ್ದೆಯನ್ನು "ಜಂಟಿ ನಿಯಂತ್ರಕರ" ಹುದ್ದೆಗೆ ಮೇಲ್ದರ್ಜೆಗೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 951

ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಸಾರ್ವಜನಿಕ ಅಲೋಪತಿ ಆಸ್ಪತ್ರೆಗಳಲ್ಲಿ ಕೇಂದ್ರ ಪುರಸ್ಕೃತ ಯೋಜನೆಯಡಿ ಪ್ರಾರಂಭಿಸುತ್ತಿರುವ ಆಯುಷ್ ಘಟಕಗಳಿಗೆ ಔಷಧಿ ಖರೀದಿಗಾಗಿ ಮಂಜೂರಾಗಿರುವ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಆಕುಕ 88 ಪಿಐಎಂ 2007, ದಿನಾಂಕ:28.11.2007

2. ಸರ್ಕಾರದ ಆದೇಶ ಸಂಖ್ಯೆ:ಆಕುಕ 77 ಪಿಐಎಂ 2008, ದಿನಾಂಕ:1.2.2008

3. ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಆಯುಷ್ 05/ಐಇಸಿ/03/2008–09, ದಿನಾಂಕ:21.4.2008

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ (1)ರಲ್ಲಿನ ಸರ್ಕಾರದ ಆದೇಶದಲ್ಲಿ 52 ಜಿಲ್ಲಾ ಸರ್ಕಾರಿ ಆಸ್ಪತ್ರೆಗಳಲ್ಲಿ ಆಯುಷ್ ವಿಭಾಗಗಳನ್ನು ತೆರೆಯಲು ರೂ. 580.00 ಲಕ್ಷಗಳ ಸಹಾಯಾನುದಾನವನ್ನು ಬಿಡುಗಡೆ ಮಾಡಿ ಸರ್ಕಾರದ ಮಂಜೂರಾತಿಯನ್ನು ನೀಡಿದೆ. ಹಾಗೂ ಆಯುಷ್ ವಿಭಾಗಗಳಿಗೆ ಬೇಕಾಗುವ ಔಷಧಿಗಳನ್ನು ಖರೀದಿಸಲು ಸಹ ಕ್ರಮ ವಹಿಸುವಂತೆ ಸೂಚಿಸಿದೆ.

ಮೇಲೆ ಓದಲಾದ ಕ್ರ.ಸಂ (2)ರಲ್ಲಿನ ಸರ್ಕಾರದ ಆದೇಶದಲ್ಲಿ, ಜಿಲ್ಲಾ ಸಾರ್ವಜನಿಕ ಆಸ್ಪತ್ರೆಗಳಲ್ಲಿ ಆಯುಷ್ ವಿಭಾಗಗಳನ್ನು ತೆರೆಯಲು ಮತ್ತು ಸದರಿ ವಿಭಾಗಗಳಿಗೆ ರಾಜ್ಯ ಸರ್ಕಾರದ ಯೋಜನೆಯಡಿಯಲ್ಲಿ ಅನುದಾನ ಒದಗಿಸಿಕೊಂಡ ಅಥವ NRHM ಅಡಿಯಲ್ಲಿ PIP ವ್ಯವಸ್ಥೆ ಮಾಡಿಕೊಳ್ಳುವ ಅಥವಾ ಹಾಲಿಯಿರುವ ಹುದ್ದೆಗಳನ್ನು ರೀ–ಡಿಪ್ಲಾಯ್‌ಮೆಂಟ್ ಮುಖಾಂತರ ಮಾನವ ಶಕ್ತಿ (ಸಿಬ್ಬಂದಿ ಸೇವೆ)ಯನ್ನು ಒದಗಿಸುವ ಷರತ್ತಿಗೊಳಪಟ್ಟು, ಜಿಲ್ಲಾ ಆಸ್ಪತ್ರೆ, ಹಾಸನ .ಕೋಲಾರ, ಚಿತ್ರದುರ್ಗ, ಚಿಕ್ಕಮಗಳೂರುಗಳಿಗೆ ಒಟ್ಟು ರೂ,. 114.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಿ ಮಂಜೂರಾತಿ ನೀಡಿದೆ.

ಮೇಲೆ ಓದಲಾದ ಕ್ರ.ಸಂ. (3) ರಲ್ಲಿನ ಪ್ರಸ್ತಾವನೆಯಲ್ಲಿ, ನಿರ್ದೇಶಕರು, ಆಯುಷ್ ನಿರ್ದೇಶನಾಲಯ ಇವರು ಸರ್ಕಾರದ ಆದೇಶಗಳಲ್ಲಿ ಬಿಡುಗಡೆ ಮಾಡಿದ ಒಟ್ಟು ರೂ. 694.00 ಲಕ್ಷಗಳಲ್ಲಿ ಔಷಧಿಗಾಗಿ ನಿಗದಿಯಾದ ತಲಾ ರೂ. 3.00 ಲಕ್ಷದಂತೆ ಒಟ್ಟು ರೂ. 158.00 ಲಕ್ಷಗಳನ್ನು ಮತ್ತು ರೂ. 28.00 ಲಕ್ಷಗಳನ್ನು ಒಟ್ಟು ರೂ. 186.00 ಲಕ್ಷಗಳನ್ನು ನಿರ್ದೇಶನಾಲಯದಿಂದ ಔಷಧಿ ಸರಬರಾಜು ಮಾಡಲು ಉಳಿಸಿಕೊಂಡಿದೆ. ಈ ಬಗ್ಗೆ ಹಣವನ್ನು ನಿರ್ದೇಶನಾಲಯದಿಂದ ಡ್ರಾ ಮಾಡಲಾಗಿದ್ದು, ನಿಯಮಾನುಸಾರ ಈ ಅನುದಾನವನ್ನು ಆಯಾ ಜಿಲ್ಲಾ ಶಸ್ತ್ರ ಚಿಕಿತ್ಸಕರಿಗೆ ನೀಡಬೇಕಾಗಿತ್ತು .ಆದರೆ, ಸರ್ಕಾರದ ಅದೇಶದಲ್ಲಿ ಸದರಿ ಅನುದಾನವನ್ನು ನಿರ್ದೇಶನಾಲಯದಲ್ಲಿ ಡ್ರಾ ಮಾಡಿ ಔಷಧಿಗಳನ್ನು ಸರ್ಕಾರಿ ಕೇಂದ್ರಿಯ ಔಷಧಾಗಾರ ದಿಂದ ಮತ್ತು ಸಿ.ಪಿ.ಎಸ್.ಯು ನಿಂದ ಖರೀದಿಸಿ ಸಂಬಂಧಿಸಿದ ಆಯುಷ್ ಇಲಾಖೆ ಗಳಿಗೆ ಒದಗಿಸಲು ಕ್ರಮ ವಹಿಸಲು ಸೂಚಿಸಲಾಗಿದೆ. ಆದರೆ, Karnataka Trasnparency in Public Procuremenrt, Act ನಂತೆ ನೇರವಾಗಿ ಸರ್ಕಾರಿ ಕೇಂದ್ರಿಯ ಔಷಧಾಗಾರದಿಂದ ಮತ್ತು ಸಿ.ಪಿ.,ಎಸ್.ಯು. ನಿಂದ ಔಷಧಿಗಳನ್ನು ಖರೀದಿಸಲು ಅವಕಾಶವಿರುವುದಿಲ್ಲ. ಆದುದರಿಂದ, ಸಂಬಂಧಿಸಿದ ಜಿಲ್ಲಾ ಶಸ್ತ್ರ ಚಿಕಿತ್ಸಕರಿಗೆ ಈ ಹಣವನ್ನು ಡಿ.ಡಿ./ಚೆಕ್ ಮುಖಾಂತರ ಅನುದಾನವನ್ನು ಹಿಂದಿರುಗಿಸಿ ಅವರ ಹಂತದಲ್ಲಿ ಔಷಧಿ ಖರೀದಿಸಲು ಸೂಚಿಸುವುದು ಸೂಕ್ತವಾಗಿದೆ ಎಂದು ತಿಳಿಸಿ, ಮೇಲಿನ 2 ಸರ್ಕಾರದ ಆದೇಶಗಳಿಗೆ ತಿದ್ದುಪಡಿ ಹೊರಡಿಸಲು ಮತ್ತು ಆಯಾ ಜಿಲ್ಲಾ ಆಸ್ಪತ್ರೆಗಳ ಜಿಲ್ಲಾ ಶಸ್ತ್ರ ಚಿಕಿತ್ಸಕರಿಗೆ ಹಣವನ್ನು ಹಿಂದಿರುಗಿಸಿ ಅವರುಗಳಿಗೆ ಔಷಧ ಖರೀದಿಸಲು ಸೂಕ್ತ ಆದೇಶವನ್ನು ನೀಡುವಂತೆ ಕೋರಿರುತ್ತಾರೆ.

ಆದುದರಿಂದ, ನಿರ್ದೇಶಕರು, ಆಯುಷ್ ನಿರ್ದೇಶನಾಲಯ ಇವರ ಪ್ರಸ್ತಾವನೆಯ ಹಿನ್ನಲೆಯಲ್ಲಿ ಸಂಬಂಧಿಸಿದ ಜಿಲ್ಲಾ ಶಸ್ತ್ರ ಚಿಕಿತ್ಸಕರಿಗೆ ಬಾಕಿ ಉಳಿದಿರುವ ಮೊತ್ತವನ್ನು ಪಾವತಿಸಿಕೊಂಡು ಕೆ.ಟಿ.ಪಿ.ಪಿ. ಕಾಯ್ದೆ ಮತ್ತು ನಿಯಮ ಹಾಗೂ ಕೆ.ಡಿ.ಎಲ್.ಡಬ್ಲ್ಯೂ.ಎಸ್. ನಿಯಮಗಳನುಸಾರ ಔಷಧಿಗಳನ್ನು ಖರೀದಿಸಲು ಕ್ರಮ ವಹಿಸಲು ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 260 ಪಿಐಎಂ 2008, ಬೆಂಗಳೂರು, ದಿನಾಂಕ:6ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ:ಆಕುಕ 88 ಪಿಐಎಂ 2007, ದಿನಾಂಕ:28.11.2007 ಮತ್ತು ಆಕುಕ 77 ಪಿಐಎಂ 2008, ದಿನಾಂಕ:1.2.2008 ರಲ್ಲಿ ಮಂಜೂರು ಮಾಡಿದ ಒಟ್ಟು ರೂ. 694.00 ಲಕ್ಷಗಳಲ್ಲಿ (ಆರುನೂರು ತೊಂಬತ್ತ ನಾಲ್ಕು ಲಕ್ಷ ರೂಪಾಯಿಗಳು ಮಾತ್ರ) ಹಂಚಿಕೆಯಾಗಿ ಉಳಿದ ಒಟ್ಟು ರೂ. 158.00 + 28.00=186.00 ಲಕ್ಷಗಳನ್ನು ಹಿಂಪಡೆದು, ಈ ಆದೇಶದೊಂದಿಗೆ, ಲಗತ್ತಿಸಿದ ಅನುಬಂಧದಲ್ಲಿನ ಜಿಲ್ಲಾ ಆಸ್ಪತ್ರೆಗಳ ಜಿಲ್ಲಾ ಶಸ್ತ್ರ ಚಿಕಿತ್ಸಕರಿಗೆ ಔಷಧಿ ಖರೀದಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ನಿರ್ದೇಶಕರು, ಆಯುಷ್ ನಿರ್ದೇಶನಾಲಯ ಇವರು ಡ್ರಾ ಮಾಡಿ ನಿರ್ದೇಶನಾಲಯದಲ್ಲಿ ಉಳಿಸಿಕೊಂಡ ಒಟ್ಟು ರೂ. 186.00 ಲಕ್ಷಗಳನ್ನು ಡಿ.ಡಿ./ಚೆಕ್ ಮುಖಾಂತರ ಅನುಬಂಧದಲ್ಲಿ ನಮೂದಿಸಿರುವ ಜಿಲ್ಲಾ ಶಸ್ತ್ರ ಚಿಕಿತ್ಸಕರಿಗೆ ಬಿಡುಗಡೆ ಮಾಡಲು ಸೂಚಿಸಿದೆ.

ಎಲ್ಲಾ ಜಿಲ್ಲಾ ಶಸ್ತ್ರ ಚಿಕಿತ್ಸಕರುಗಳಿಗೆ ಔಷಧಿ ಖರೀದಿಗೆ ಸಂಬಂಧಿಸಿದಂತೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ ಮತ್ತು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಿ ಕರ್ನಾಟಕ ಔಷಧ ಮಳಿಗೆ (Karnataka Drug Logistics Warehouse Society) ಮೂಲಕ ಖರೀದಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 952

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

**ಕಂದಾಯ ಸಚಿವಾಲಯ**

**ವಿಷಯ:** 2008–09ನೇ ಸಾಲಿನಲ್ಲಿ ಸುರಿದ ಭಾರಿ ಮಳೆಯಿಂದ ಆಗಿರುವ ಹಾನಿಗೆ ಪರಿಹಾರ ನೀಡಲು ಪ್ರಕೃತಿ ವಿಕೋಪ ಪರಿಹಾರನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ:**

2008–09ನೇ ಸಾಲಿನಲ್ಲಿ ಇತ್ತೀಚೆಗೆ ಸುರಿದ ಭಾರಿ ಮಳೆಯಿಂದ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಹಾನಿ ಸಂಭವಿಸಿದ್ದು, ಸದರಿ ಹಾನಿಗೆ ತುರ್ತ ಪರಿಹಾರ ಕೈಗೊಳ್ಳುವ ವಿವಿಧ ಜಿಲ್ಲಾಧಿಕಾರಿಗಳು ಅನುದಾನ ಬಿಡುಗಡೆ ಮಾಡುವಂತೆ ಕೋರಿರುವ ಮೇರೆಗೆ ಸರ್ಕಾರವು ಪ್ರಕೃತಿ ವಿಕೋಪ ಪರಿಹಾರನಿಧಿಯಿಂದ ಹಣ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡ ಆದೇಶ ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂ.ಇ. 145 ಟಿ.ಎನ್.ಆರ್. 2008P, ಬೆಂಗಳೂರು, ದಿನಾಂಕ:13ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಪ್ರಕೃತಿ ವಿಕೋಪದಿಂದ ಉಂಟಾದ ಹಾನಿಗಳಿಗೆ ತುರ್ತು ಪರಿಹಾರ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಈ ಕೆಳಕಂಡ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 1 | ಬಾಗಲಕೋಟೆ | 125.00 |
| 2 | ಬೆಂಗಳೂರು ಗ್ರಾಮಾಂತರ | 50.00 |
| 3 | ಬೆಳಗಾಂ | 100.00 |
| 4 | ಬೀದರ್ | 50.00 |
| 5 | ಬಿಜಾಪುರ | 50.00 |
| 6 | ಚಾಮರಾಜನಗರ | 25.00 |
| 7 | ಚಿಕ್ಕಮಗಳೂರು | 25.00 |
| 8 | ದಾವಣಗೆರೆ | 50.00 |
| 9 | ಧಾರವಾಡ | 150.00 |
| 10 | ಗದಗ್ | 150.00 |
| 11 | ಗುಲ್ಬರ್ಗಾ | 100.00 |
| 12 | ಹಾಸನ | 50.00 |
| 13 | ಹಾವೇರಿ | 100.00 |
| 14 | ಕೋಲಾರ | 25.00 |
| 15 | ಕೊಪ್ಪಳ | 50.00 |
| 16 | ಮಂಡ್ಯ | 25.00 |
| 17 | ಮೈಸೂರು | 25.00 |
| 18 | ರಾಯಚೂರು | 100.00 |
| 19 | ಶಿವಮೊಗ್ಗ | 50.00 |

| | | |
|---|---|---|
| 20 | ತುಮಕೂರು | 50.00 |
| 21 | ಉಡುಪಿ | 100.00 |
| 22 | ರಾಮನಗರ | 25.00 |
| 23 | ಚಿಕ್ಕಬಳ್ಳಾಪುರ | 25.00 |
| | ಒಟ್ಟು ರೂ. | 1500.00 |

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಯಮಾನುಸಾರ ಕೆಳಕಂಡಂತೆ ಪರಿಹಾರ ಕಾರ್ಯಗಳಿಗೆ ಆದ್ಯತೆ ಮೇಲೆ ಉಪಯೋಗಿಸತಕ್ಕದ್ದು.

1. ಮಾನವ ಹಾನಿ 2. ಜಾನುವಾರು ಹಾನಿ 3. ಮನೆ ಹಾನಿ 4. ಬೆಳೆ ಹಾನಿ 5. ಕುಡಿಯುವ ನೀರು 6, ಮೂಲಭೂತ ಸೌಕರ್ಯಗಳ ತುರ್ತು ದುರಸ್ತಿ

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್.ಡಿ 467 ವೆಚ್ಚ. 07/08, ದಿನಾಂಕ:12.5.2008ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಲೀಲಾವತಿ**

ಪಿ.ಆರ್. 953

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ

(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಎನ್.ಹೆಚ್. ಸತ್ಯಮೂರ್ತಿ ನಿರ್ದೇಶಕರು, ಸರ್ವಶಿಕ್ಷಣ ಅಭಿಯಾನ ಇವರ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1957ರ ನಿಯಮ 60 ರಂತೆ ಸ್ಥಿರೀಕರಿಸುವ ಬಗ್ಗೆ– ಆದೇಶ

**ಓದಲಾಗಿದೆ:** 1. ಸರ್ಕಾರಿ ಅಧಿಸೂಚನೆ:ಸಂಖ್ಯೆ:ಸಿಆಸುಇ 173 ಸೇಇಮು 2007, ದಿನಾಂಕ:18.2.2008

2.ಮಹಾಲೇಖಪಾಲರು ಕರ್ನಾಟಕ ಇವರು ಪತ್ರ ಸಂಖ್ಯೆ:ಜಿಎಫ್ಎ:ಇ2:925:1863, ದಿನಾಂಕ: 14.3.2008

3. ಶ್ರೀ ಎನ್.ಹೆಚ್. ಸತ್ಯಮೂರ್ತಿ ನಿರ್ದೇಶಕರು, ಸರ್ವಶಿಕ್ಷಣ ಅಭಿಯಾನ ಇವರ ಪತ್ರ ದಿನಾಂಕ: 25.3.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಇತರರೊಡನೆ ಶ್ರೀ ಎನ್. ಹೆಚ್. ಸತ್ಯಮೂರ್ತಿ ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರಿಗೆ ವೇತನ ಶ್ರೇಣಿ 24450–31800ರಲ್ಲಿ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನ, ಬೆಂಗಳೂರು ಇಲ್ಲಿಗೆ ಸ್ಥಾನಪನ್ನ ಪದೋನ್ನತಿ ನೀಡಿ ನೇಮಿಸಲಾಗಿತ್ತು. ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮಹಾಲೇಖಪಾಲರು ಕರ್ನಾಟಕ ಅವರು ಶ್ರೀ ಎನ್.ಹೆಚ್. ಸತ್ಯಮೂರ್ತಿ ಇವರಿಗೆ ಸ್ಥಾನಪನ್ನ ಪದೋನ್ನತಿ ನೀಡಿ ಸರ್ವ ಶಿಕ್ಷಣ ಅಭಿಯಾನ ಇಲ್ಲಿಗೆ ನೇಮಕಾತಿ ಮಾಡಿದ್ದು, ಈ ಹುದ್ದೆಯು ಇಲಾಖಾ ವೃಂದದ ಹುದ್ದೆಯಲ್ಲವಾದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 60 ರಂತೆ ಇವರ ಪದೋನ್ನತಿಯನ್ನು ಸ್ಥಿರೀಕರಿಸುವಂತೆ ಕೋರಿರುತ್ತಾರೆ. ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಶ್ರೀ ಎನ್.ಹೆಚ್. ಸತ್ಯಮೂರ್ತಿ, ಇವರು ತಮ್ಮ ವೇತನವನ್ನು ನಿಗದಿಗೊಳಿಸುವ ಸಲುವಾಗಿ ತಮ್ಮನ್ನು ನೇಮಕಾತಿ ಮಾಡಿರುವ ಹುದ್ದೆಯಲ್ಲಿ ಸಕ್ರಮಗೊಳಿಸಲು ಆದೇಶ ಹೊರಡಿಸುವಂತೆ ಕೋರಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 173 ಸೇಇಮು 2007, ಬೆಂಗಳೂರು, ದಿನಾಂಕ:17ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನ ಈ ಹುದ್ದೆಯು ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದದ ಎಸ್‌ಕೇಡರ್ ಹುದ್ದೆಯಾಗಿರುವುದರಿಂದ ಇವರಿಗಿಂತ ಕಿರಿಯರಾದ ಶ್ರೀ ಕೆ. ಗಂಗಪ್ಪಗೌಡ, ನಿರ್ದೇಶಕರು (ಪ್ರಾಥಮಿಕ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಇಲಾಖಾ ವೃಂದದ ನಿರ್ದೇಶಕರ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ಇವರ ವೇತನ ನಿಗದಿಗೊಳಿಸಿರುವಂತೆಯೇ ಕನಾಟಕ ನಾಗರೀಕ ಸೇವಾ ನಿಯಮಾವಳಿ 1957 ರ ನಿಯಮ 60 ರಂತೆ ಇಲಾಖೆಯ ಎಕ್ಸ್‌ಕೇಡರ್ ಹುದ್ದೆಯಲ್ಲಿ ಸರ್ವ ಶಿಕ್ಷಣ ಅಭಿಯಾನದ ನಿರ್ದೇಶಕರಾಗಿ ಕೆಲಸ ನಿರ್ವಹಿಸುತ್ತಿರುವ ಶ್ರೀ ಎನ್. ಹೆಚ್. ಸತ್ಯಮೂರ್ತಿಯವರ ವೇತನವನ್ನು ನಿಗದಿಗೊಳಿಸಬೇಕೆಂದು ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 956

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ:** ಶ್ರೀ ಜೆ. ಕೆನಡಿ, ದ್ವಿತೀಯ ದರ್ಜೆ ಸಹಾಯಕರು, ಸರ್ಕಾರಿ ಬಾಲಮಂದಿರ, (ಕಡ್ಡಾಯ ನಿವೃತ್ತಿಯಲ್ಲಿರುವವರು) ಇವರ ಮೇಲ್ಮನವಿ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಮಮಇ 576 ಎಸ್‌ಜೆಡಿ 2003 ದಿ:25.1.2008

2. ಶ್ರೀ ಜೆ. ಕೆನಡಿ, ದ್ವಿದ.ಸ. (ಕಡ್ಡಾಯ ನಿವೃತ್ತಿಯಲ್ಲಿರುವವರು) ಇವರ ದಿ:26.2.2008ರ ಮನವಿ

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ ಶ್ರೀ ಜೆ. ಕೆನಡಿ, ದ್ವಿತೀಯ ದರ್ಜೆ ಸಹಾಯಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳು, (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8 (vi) ರನ್ವಯ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಲಾಗಿದೆ. ಮತ್ತು ಇವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟ ಮೊತ್ತ ರೂ. 72.672–00 (ರೂಪಾಯಿ ಎಪ್ಪತ್ತೆರಡು ಸಾವಿರದ ಆರುನೂರ ಎಪ್ಪತ್ತೆರಡು ಮಾತ್ರ)ಗಳನ್ನು ಇವರ ಕಡ್ಡಾಯ ನಿವೃತ್ತಿಯಿಂದ ಒದಗಿಸಲಾಗುವ ನಿವೃತ್ತಿ ಉಪದಾನದಿಂದ ಕಟಾಯಿಸಿಕೊಳ್ಳಲು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಶ್ರೀ ಜೆ. ಕೆನಡಿ. ರವರು ಸರ್ಕಾರಕ್ಕೆ ಮನವಿ ಸಲ್ಲಿಸಿ ಅವರ ವಿರುದ್ಧದ ಆರೋಪಗಳನ್ನು ಅಲ್ಲಗಳೆದಿದ್ದು, ರೂ. 72,672–00 ಗಳ ವಸೂಲಾತಿ ಜೊತೆಗೆ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆ ವಿಧಿಸಿರುವುದು ಹೆಚ್ಚಿನ ಪ್ರಮಾಣದ ದಂಡನೆಯಾಗಿರುತ್ತದೆಂದು ತಿಳಿಸಿರುತ್ತಾರೆ. ಸದರಿ ನೌಕರರು ನೀಡಿರುವ ಹೇಳಿಕೆಯಲ್ಲಿ ಅವರ ನಿರಪರಾಧಿತ್ವವನ್ನು ಸಾಬೀತು ಪಡಿಸುವಂತಹ ಯಾವುದೇ ಹೊಸ ಅಂಶಗಳು ಇರುವುದಿಲ್ಲವಾದ್ದರಿಂದ ಅವರ ದಿ:26.2.2008 ರ ಮೇಲ್ಮನವಿಯನ್ನು ತಿರಸ್ಕರಿಸಲು ನಿರ್ಧರಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಮಇ 107 ಎಸ್ ಜೆಡಿ 2008, ಬೆಂಗಳೂರು, ದಿನಾಂಕ:11ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಜೆ. ಕೆನಡಿ, ದ್ವಿತೀಯ ದರ್ಜೆ ಸಹಾಯಕರು, ಬಾಲಮಂದಿರ (ಹಿರಿಯ), ಬಳ್ಳಾರಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮ 1957ರ ನಿಯಮ 8 (vi) ರ ಪ್ರಕಾರ ಸೇವೆಯಿಂದ ಕಡ್ಡಾಯ ನಿವೃತ್ತಿ ಮಾಡಿರುವ ವಿರುದ್ಧ ಸಲ್ಲಿಸಿರುವ ಮೇಲ್ಮನವಿಯನ್ನು ಸರ್ಕಾರವು ಪರಿಶೀಲಿಸಿ ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 957

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**INFRASTRUCTURE DEVELOPMENT SECRETARIAT**

**Sub :** Release of funds for Construction of RUB in Lieu of L.C. No-31 between Gadag and Hulakoti stations (Deposit work)

**Read :** Letter No. W. 352/CN/BNC/L/RUB/LC.No. 31/GDC dated: 4.4.2008 from the Chief Administrative Officer, S.W.R. Bangalore.

**Preamble:**

The Chief Adminstrative Officer, (Construction), South Western Railway, Bangalore in his letter dated 4.4.2008 read at (1) above, has requested to arrange to deposit an amount of Rs. 1.14 crores towards for construction of Road Under Bridge in lieu of L.C.No. 31 between Gadag-Hulikoti stations on depost contribution and to bear any increase in the cost over this cost by the State Government and to return savings if any.

2) After examining the proposal of the Chief Administrative Officer (Construction) SWR, Bangalore, Government of Karnataka has decided to release Rs. 1.14 crores towards construction of RUB in lieu of LC.No. 31 between Gadag-Hulakoti stations on the basis of deposit contribution work

Hence this order.

**Government Order No. IDD 121 NSW 2006, Bangalore, Dated:16th June 2008**

Government is pleased to sanction Rs. 1.14 crores (Rupees One crore Fourteen lakhs only) for construction of RUB in lieu of L.C.No. 31 between Gadag-Hulakoti stations on the basis of deposit contribution work.

2) This amount shall be met out under the Head of Account 5465-01-190-3-04-K-RIDE RoB/RuB Projects-211-Investment"

3) The Company Secretary and Chief Financial Officer IDeck shall draw the amount on a payees receipt duly countersigned by the Under Secretary to Government , Infrastructure Development Department and pay the same to the Sr. AFA (Construction), South Western Railway, Bangalore

4) This order issues in exercise of the Financial powers delegated to Secretaries/Principal Secretaries of Administrative Department vide G.O.No. FDI TFP 2008 dated 16.5.2008.

By Order and in the name of the Government of Karnataka,

P.R. 958

N. Manjula Geetha

Under Secretary to Government

Infrastructure Development Department

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎನ್. ಪುಟ್ಟಸ್ವಾಮಿ, ಹಿಂದಿನ ತಹಶೀಲ್ದಾರ್, ಹೊಳೇನರಸೀಪುರ (ಪ್ರಸ್ತುತ ನಿವೃತ್ತರು), ಶ್ರೀ ಜಿ.ಎಂ. ಸಣ್ಣಜವರೇಗೌಡ, ರಾಜಸ್ವ ನಿರೀಕ್ಷಕರು ಮತ್ತು ಶ್ರೀ ಪಿ. ಲಿಂಗಪ್ಪ, ಗ್ರಾಮಲೆಕ್ಕಿಗ, ತಾಲ್ಲೂಕು ಕಛೇರಿ ಹೊಳೆನರಸೀಪುರ ಇವರುಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆ ಬಗ್ಗೆ– ದೋಷಾಮುಕ್ತಗೊಳಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಉಪನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ಅ.ಸ.ಪತ್ರ ಸಂ:ಕಂಪ್ಲೇಂಟ್/ಉಪಲೋಕ್/ಎಂವೈಎಸ್/2236/2003/ಡಿಆರ್‌ಇ–3, ದಿನಾಂಕ:22–10–2005.
2. ಸರ್ಕಾರದ ಆದೇಶ ಸಂ;ಕಂಇ 54 ಎಡಿಇ 2005, ದಿನಾಂಕ:20–3–2006
3. ಮಾನ್ಯ ಉಪಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಇವರ ಪತ್ರದ ಸಂ: LOK/ARE-3/ Enq-18/2007, Dt:09.05.2008.

**ಪ್ರಸ್ತಾವನೆ:**

ಮೇಲೆ ಕ್ರ.ಸಂ (1)ರಲ್ಲಿ ಓದಲಾದ ಪತ್ರದೊಂದಿಗೆ ಉಪನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರು ಹಾಸನ ಜಿಲ್ಲೆ, ಹೊಳೆನರಸೀಪುರ ತಾಲ್ಲೂಕಿನ ಚಿಕ್ಕಕಾಡನೂರು ಗ್ರಾಮದ ಸ.ನಂ. 42/6ಎ ಜಮೀನಿನ ವಿವಾದಕ್ಕೆ ಸಂಬಂಧಿಸಿದಂತೆ, ಹೊಳೇನರಸೀಪುರ ತಾಲ್ಲೂಕಿನ ಅಂದಿನ ತಹಶೀಲ್ದಾರರಾದ ಶ್ರೀ ಎನ್. ಪುಟ್ಟಸ್ವಾಮಿ, ಪ್ರಸ್ತುತ ನಿವೃತ್ತ, ಶ್ರೀ ಜಿ.ಎಂ. ಸಣ್ಣಜವರೇಗೌಡ, ರಾಜಸ್ವ ನಿರೀಕ್ಷಕರು ಮತ್ತು ಶ್ರೀ ಪಿ. ಲಿಂಗಪ್ಪ ಗ್ರಾಮಲೆಕ್ಕಿಗ ಇವರುಗಳ ವಿರುದ್ಧ ಶ್ರೀಮತಿ ನಿಂಗಮ್ಮ ಕೋಂ ಜವರೇಗೌಡ ಚಿಕ್ಕಕಾಡನೂರು ಗ್ರಾಮ, ಹೊಳೆನರಸೀಪುರ ತಾಲ್ಲೂಕು, ಇವರು ಮಾನ್ಯ ಲೋಕಾಯುಕ್ತರಿಗೆ ಸಲ್ಲಿಸಿರುವ ದೂರಿನ ಬಗ್ಗೆ ಪ್ರಾಥಮಿಕ ವಿಚಾರಣೆ ನಡೆಸಿ, ಮಾನ್ಯ ಲೋಕಾಯುಕ್ತರು ನೀಡಿರುವ ವರದಿಯನ್ನು ಕಳುಹಿಸಿಕೊಟ್ಟಿದ್ದರು. ಸದರಿ ವರದಿಯಲ್ಲಿ ಮೇಲ್ಕಂಡ ಮೂರು ಜನ ಆರೋಪಿತರು ಕರ್ತವ್ಯ ಲೋಪವೆಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಅವರುಗಳ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ

(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳನ್ವಯ ಶಿಸ್ತು ಕ್ರಮ ಜರುಗಿಸಿ ಕಠಿಣ ದಂಡನೆ ವಿಧಿಸುವ ಬಗ್ಗೆ ಶಿಸ್ತು ನಡವಳಿಗಳನ್ನು ಪ್ರಾರಂಭಿಸಲು ಕ್ರಮ ಕೈಗೊಳ್ಳಲು ಕರ್ನಾಟಕ ಲೋಕಾಯುಕ್ತ ಕಾಯ್ದೆ ಅಧಿನಿಯಮ 12(3) ರನ್ವಯ ಶಿಫಾರಸ್ಸು ಮಾಡುತ್ತಾ ಅಂತಹ ಕ್ರಮವನ್ನು ಕೈಗೊಂಡ ಬಗ್ಗೆ ಸದರಿ ಕಾಯ್ದೆ 12(4) ರನ್ವಯ ಮೂರು ತಿಂಗಳೊಳಗೆ ಮಾನ್ಯ ಉಪಲೋಕಾಯುಕ್ತರಿಗೆ ಮಾಹಿತಿ ನೀಡುವಂತೆ ಕೋರಲಾಗಿತ್ತು.

ಈ ಹಿನ್ನಲೆಯಲ್ಲಿ ಮೇಲೆ ಕ್ರ.ಸಂ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎನ್. ಪುಟ್ಟಸಾಮಿ, ಹಿಂದಿನ ತಹಶೀಲ್ದಾರ್, ಹೊಳೇನರಸೀಪುರ (ಪ್ರಸ್ತುತ ನಿವೃತ್ತರು), ಶ್ರೀ ಜಿ.ಎಂ. ಸಣ್ಣಜವರೇಗೌಡ ರಾಜಸ್ವ ನಿರೀಕ್ಷಕ ಮತ್ತು ಶ್ರೀ ಪಿ. ಲಿಂಗಪ್ಪ ಗ್ರಾಮಲೆಕ್ಕಿಗ ತಾಲ್ಲೂಕು ಕಛೇರಿ, ಹೊಳೇನರಸೀಪುರ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 14–ಎ ರನ್ವಯ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಿ, ಸರ್ಕಾರಕ್ಕೆ ವರದಿ ನೀಡಲು ಈ ಪ್ರಕರಣವನ್ನು ಮಾನ್ಯ ಉಪಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಿಕೊಡಲಾಗಿತ್ತು.

ಮೇಲೆ ಕ್ರ.ಸಂ (3)ರಲ್ಲಿ ಓದಲಾದ ಮಾನ್ಯ ಉಪಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಇವರ ದಿನಾಂಕ:9.5.2008ರ ಪತ್ರದಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಿ ವರದಿಯನ್ನು ಕಳುಹಿಸಿದ್ದಾರೆ. ಹಾಗೂ ಈ ಪ್ರಕರಣದಲ್ಲಿ ಭಾಗಿಯಾಗಿರುವ ಶ್ರೀ ಎನ್. ಪುಟ್ಟಸ್ವಾಮಿ, ಹಿಂದಿನ ತಹಶೀಲ್ದಾರ್ ಹೊಳೇನರಸೀಪುರ (ಪ್ರಸ್ತುತ ನಿವೃತ್ತರು), ಶ್ರೀ ಜಿ.ಎಂ ಸಣ್ಣಜವರೇಗೌಡ, ರಾಜಸ್ವ ನಿರೀಕ್ಷಕ ಹಾಗೂ ಶ್ರೀ ಪಿ. ಲಿಂಗಪ್ಪ, ಗ್ರಾಮಲೆಕ್ಕಿಗ, ತಾಲ್ಲೂಕು ಕಛೇರಿ, ಹೊಳೇನರಸೀಪುರ, ಇವರುಗಳ ವಿರುದ್ಧ ಮಾಡಲಾದ ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿರುವುದಿಲ್ಲವಾದ್ದರಿಂದ ಇವರುಗಳನ್ನು ದೋಷಮುಕ್ತಗೊಳಿಸಿ ಆದೇಶ ಹೊರಡಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮಾನ್ಯ ಉಪಲೋಕಾಯುಕ್ತರ ವರದಿ ಹಾಗೂ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಸರ್ಕಾರವು ಮೇಲ್ಕಂಡ ಅಧಿಕಾರಿ/ನೌಕರರ ವಿರುದ್ಧ ಆಪಾದನೆಯಿಂದ ದೋಷಮುಕ್ತಗೊಳಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 54 ಎಡಿಇ 2005, ಬೆಂಗಳೂರು, ದಿನಾಂಕ:19ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ, ಶ್ರೀ ಎನ್. ಪುಟ್ಟಸ್ವಾಮಿ ಹಿಂದಿನ ತಹಶೀಲ್ದಾರ್, ಹೊಳೇನರಸೀಪುರ ತಾಲ್ಲೂಕು (ಪ್ರಸ್ತುತ ನಿವೃತ್ತರು), ಶ್ರೀ ಜಿ.ಎಂ. ಸಣ್ಣಜವರೇಗೌಡ, ರಾಜಸ್ವ ನಿರೀಕ್ಷಕ ಮತ್ತು ಶ್ರೀ ಪಿ. ಲಿಂಗಪ್ಪ, ಗ್ರಾಮಲೆಕ್ಕಿಗ, ತಾಲ್ಲೂಕು ಕಛೇರಿ, ಹೊಳೇನರಸೀಪುರ ಇವರುಗಳ ವಿರುದ್ಧದ ಆರೋಪಗಳು, ಮಾನ್ಯ ಉಪಲೋಕಾಯುಕ್ತರ ವರದಿಯಲ್ಲಿ ಸಾಬೀತಾಗಿಲ್ಲದ ಕಾರಣ, ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಇವರುಗಳನ್ನು ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 960

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಎಂ.ವಿ. ತಿಮ್ಮಯ್ಯ, ಜಂಟಿ ನಿರ್ದೇಶಕರು ಸಮಾಜ ಕಲ್ಯಾಣ ಇಲಾಖೆ ನಿಯೋಜನೆ ಮೇಲೆ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಇವರಿಗೆ ಸ್ವ ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ: 25.3.2008 ಸಂಖ್ಯೆ:ಸಕನಿ /ಸಿಬಂದಿ–1/ಸಿಆರ್ ವೈಕ/2007–08ರ ಸಮಾಜ ಕಲ್ಯಾಣ ಇಲಾಖೆಯ ಆಯುಕ್ತರ ಪತ್ರ

2. ದಿನಾಂಕ:8–4–2008 ಮತ್ತು 9–4–2008ರಂದು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಲ್ಲಿ ವ್ಯವಸ್ಥಾಪಕ ನಿರ್ದೇಶಕರು ಹುದ್ದೆಯಲ್ಲಿ ನಿಯೋಜನೆ ಮೇಲಿರುವ ಶ್ರೀ ಎಂ.ವಿ ತಿಮ್ಮಯ್ಯ, ಜಂಟಿ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ರವರು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ಇವರಿಗೆ ಸಲ್ಲಿಸಿದ ಅರ್ಜಿ.

**ಪ್ರಸ್ತಾವನೆ:**

ಆಯುಕ್ತರು, ಸಮಾಜ ಕಲ್ಯಾಣ ಇಲಾಖೆರವರು ಮೇಲೆ (1)ರಲ್ಲಿ ಓದಲಾದ ದಿನಾಂಕ:25–3–2008ರ ತಮ್ಮ ಪತ್ರದಲ್ಲಿ ಶ್ರೀ ಎಂ.ವಿ. ತಿಮ್ಮಯ್ಯ, ಜಂಟಿ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ಕೇಂದ್ರ ಕಛೇರಿ ಇವರು ಪ್ರಸಕ್ತ ನಿಯೋಜನೆ ಮೇಲೆ

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದು 20 ವರ್ಷಗಳಿಗೂ ಹೆಚ್ಚಿನ ಅವಧಿಗೆ ಸೇವೆ ಸಲ್ಲಿಸಿರುವುದರಿಂದ ಸರ್ಕಾರದ ನಿಯಮಗಳ ಪ್ರಕಾರ ಕೌಟುಂಬಿಕ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರಿ ಸೇವೆಯಿಂದ ಸ್ವಇಚ್ಛಾ ನಿವೃತ್ತಿ ಹೊಂದಲು ಅನುಮತಿ ಕೋರಿರುತ್ತಾರೆ. ಸದರಿ ಅಧಿಕಾರಿಗಳು ದಿ:7–5–1976 ರಂದು ಸರ್ಕಾರಿ ಸೇವೆಗೆ ಸೇರಿದ್ದು ಕೆ.ಸಿ.ಎಸ್.ಆರ್. ನಿಯಮ 285(1)(ಎ) ರನ್ವಯ ಸ್ವಇಚ್ಛಾ ನಿವೃತ್ತಿಗೆ ಅಗತ್ಯವಿರುವ 20 ವರ್ಷಗಳಿಗೂ ಮೀರಿದ ಸರ್ಕಾರಿ ಸೇವೆಯನ್ನು ಸಲ್ಲಿಸಿದ್ದಾರೆ ಎಂದು ತಿಳಿಸುತ್ತಾ ಸದರಿಯವರ ವಿರುದ್ಧ ತಮ್ಮ ಕಛೇರಿಯ ಹಂತದಲ್ಲಿ ಯಾವುದೇ ಇಲಾಖಾ ವಿಚಾರಣೆ ಬಾಕಿ ಇಲ್ಲವೆಂತಲೂ ಹಾಗೂ ಸದರಿಯವರು ಈ ಹಿಂದೆ ಗೃಹ ನಿರ್ಮಾಣಕ್ಕಾಗಿ ರೂ. 1,50,000–00ಗಳ ಮುಂಗಡ ಸಾಲ ಪಡೆದಿರುವುದು ಹಾಗೂ ಗಣಕಯಂತ್ರ ಖರೀದಿಗಾಗಿ ರೂ. 50,000–00ಗಳನ್ನು ಮುಂಗಡವಾಗಿ ಪಡೆದಿರುವ ಬಗ್ಗೆ ತಿಳಿಸುತ್ತಾ ಈ ಕುರಿತಂತೆ ಬಾಕಿ ಇರುವ ಹಣದ ಬಗ್ಗೆ ಮಾಹಿತಿ ಪಡೆಯಲು ಮಹಾಲೇಖಪಾಲರೊಡನೆ ಪತ್ರ ವ್ಯವಹರಿಸುತ್ತಿರುವುದಾಗಿ ತಿಳಿಸಿದ್ದಾರೆ. ಅಲ್ಲದೇ ಇವರನ್ನು ಸರ್ಕಾರಿ ಸೇವೆಯಿಂದ ಸ್ವಇಚ್ಛಾ ನಿವೃತ್ತಿಗೊಳಿಸಲು ಅನುಮತಿ ಸಹಿತ ಸರ್ಕಾರದ ಆದೇಶ ಹೊರಡಿಸುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಶ್ರೀ ಎಂ.ವಿ. ತಿಮ್ಮಯ್ಯ ರವರು ದಿನಾಂಕ:8–4–2008 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ ಸಮಾಜ ಕಲ್ಯಾಣ ಇಲಾಖೆ ರವರಿಗೆ ಸಲ್ಲಿಸಿದ ಮನವಿಯಲ್ಲಿ ತಮ್ಮಿಂದ ಸರ್ಕಾರಕ್ಕೆ ಯವುದೇ ಬಾಕಿ ನೀಡಬೇಕಾದಲ್ಲಿ ಅದನ್ನು ತಮ್ಮ ಡಿ.ಸಿ.ಆರ್.ಜಿ. ಹಣದಿಂದ ಕಟಾಯಿಸಿಕೊಳ್ಳಬಹುದು. ತನಗೆ ಮುಂದಿನ ಅಸೆಂಬ್ಲಿ ಚುನಾವಣೆಗಳಲ್ಲಿ ಸ್ವರ್ಧಿಸಲು ಬಿ.ಜೆ.ಪಿ ಯಿಂದ ಟಿಕೇಟ್ ಸಿಕ್ಕಿರುವುದರಿಂದ ಮತ್ತು ಅಭ್ಯರ್ಥಿಗಳ ಪಟ್ಟಿಯನ್ನು ದಿ:10–4–2008 ರಂದು ಪ್ರಕಟಿಸಲಾಗುತ್ತಿದೆಯೆಂದು ತಿಳಿಸುತ್ತಾ ಮುಂದಿನ ಅಸೆಂಬ್ಲಿ ಚುನಾವಣೆಗಳಲ್ಲಿ ಸ್ವರ್ದಿಸಲು ಅನುಕೂಲವಾಗುವಂತೆ ದಿ:10–4–2008 ರಿಂದ ಜಾರಿಗೆ ಬರುವಂತೆ ತಮಗೆ ಸ್ವಇಚ್ಛಾ ನಿವೃತ್ತಿ ನೀಡಿ ಆದೇಶ ಹೊರಡಿಸಲು ಕೋರಿರುತ್ತಾರೆ. ಪುನಃ ದಿ:11–4–2008 ರಂದು ಸಲ್ಲಿಸಿದ ದಿ:9–4–2008 ರ ಮನವಿಯಲ್ಲಿ ದಿ:10–4–2008 ರಂದು ಪ್ರಕಟಿಸಲಾದಂತೆ ತಮಗೆ ಬಿ.ಜೆ.ಪಿ ಯಿಂದ ಟಿಕೇಟ್ ನೀಡಿಲ್ಲವೆಂದು ತಿಳಿಸುತ್ತಾ ತಮ್ಮ ಸ್ವಇಚ್ಛಾ ನಿವೃತ್ತಿ ಕೋರಿಕೆಯನ್ನು ರದ್ದುಪಡಿಸಲು ಮತ್ತು ಸ್ವಇಚ್ಛಾ ನಿವೃತ್ತಿಗೆ 90 ದಿನಗಳ ಇನ್ನೂ ಮುಗಿದಿಲ್ಲವಾದ್ದರಿಂದ ಸೇವೆಯಲ್ಲಿ ಮುಂದುವರೆಯಲು ಅನುಮತಿ ನೀಡಲು ಕೋರಿರುತ್ತಾರೆ ಮತ್ತು ತಾವು ಸ್ವಇಚ್ಛಾ ನಿವೃತ್ತಿ ಕೋರಿಕೆಯನ್ನು ಹಿಂತೆಗೆದುಕೊಳ್ಳುತ್ತಿರುವುದಾಗಿ ತಿಳಿಸಿರುತ್ತಾರೆ.

ವಿಷಯವನ್ನು ಕಾನೂನು ಇಲಾಖೆಯೊಂದಿಗೆ ಸಮಾಲೋಚಿಸಿ ಪರಿಶೀಲಿಸಲಾಗಿದೆ. ಶ್ರೀ ಎಂ.ವಿ. ತಿಮ್ಮಯ್ಯ ರವರು ಕೌಟುಂಬಿಕ ಕಾರಣಗಳನ್ನು ನೀಡಿ ದಿ:4.2.2008ರ ಸ್ವಇಚ್ಛಾ ನಿವೃತ್ತಿ ತಿಳುವಳಿಕೆಯನ್ನು ನೀಡಿದ್ದಾರೆ. ಸಾಮಾನ್ಯ ಕ್ರಮದಲ್ಲಿ ಪ್ರಸ್ತಾಪಿತ ದಿ:4–2–2008ರ ತಿಳುವಳಿಕೆ ಆಧರಿಸಿ ಸ್ವ ಇಚ್ಛಾ ನಿವೃತ್ತಿಯು ಕೆ.ಸಿ.ಎಸ್.ಆರ್ಸ್. ನಿಯಮಾವಳಿಗಳ ನಿಯಮ 285 ಉಪ ನಿಯಮ (2) ಕ್ಲಾಸ್ (XI) ರಡಿಯಲ್ಲಿ ತಿಳಿಸಿದಂತೆ ನೇಮಕಾತಿ ಪ್ರಾಧಿಕಾರದಿಂದ ಅದು ಅನುಮೋದನೆಯಾದಂದಿನಿಂದ ಜಾರಿಗೆ ಬರಬೇಕಾಗಿತ್ತು. ಆದರೂ ಮೇಲ್ತಿಳಿಸಿದ ದಿ:4–2–2008ರ ತಿಳುವಳಿಕೆಗೆ ಮುಂದುವರೆದಂತೆ ವಿವಾದಾತಿತವಾಗಿ ಶ್ರೀ ಎಂ.ವಿ. ತಿಮ್ಮಯ್ಯ ರವರು ಉದ್ದೇಶಿತ ಸ್ವಇಚ್ಛಾ ನಿವೃತ್ತಿ ದಿನಾಂಕವನ್ನು ದಿ:10–4–2008 ಎಂದು ನಿಗದಿಪಡಿಸಿ ದಿ:8–4–2008ರ ಮನವಿಯನ್ನು ನೀಡಿರುತ್ತಾರೆ. ಇಂತಹ ಸಂದರ್ಭಗಳಲ್ಲಿ ಕೆ.ಸಿ.ಎಸ್.ಆರ್ಸ್ ನಿಯಮ 285 ಉಪ ನಿಯಮ (2) ಕ್ಲಾಸ್ (X) ಅನ್ವಯವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಸ್ವಇಚ್ಛಾ ನಿವೃತ್ತಿಯ ತಿಳುವಳೀಕೆಯನ್ನು ನೇಮಕಾತಿ ಪ್ರಾಧಿಕಾರವು ಅನುಮೋದನೆಯೊಡನೆ ಕೋರಿಕೆಯನ್ನು ಉದ್ದೇಶಿತ ಸ್ವಇಚ್ಛಾ ನಿವೃತ್ತಿ ದಿನಾಂಕದೊಳಗೆ ಮಾಡಿದ್ದಲ್ಲಿ ಮತ್ತು ಮೂಲ ತಿಳುವಳಿಕೆಯಲ್ಲಿನ ಸಂದರ್ಭಗಳು ಬದಲಾವಣೆಯಾಗಿರುವುದನ್ನು ಸಾಬೀತು ಪಡಿಸಿದ್ದಲ್ಲಿ ಮಾತ್ರ ಹಿಂತೆಗೆದುಕೊಳ್ಳಬಹುದಾಗಿದೆ. ದಿ:9–4–2008ರ ಅರ್ಜಿಯಲ್ಲಿ ದಿ:4–2–2008 ರ ಮೂಲ ಅರ್ಜಿಯಲ್ಲಿ ತಿಳಿಸಿದ ಸಂದರ್ಭಗಳು ಬದಲಾವಣೆಯಾಗಿರುವ ಬಗ್ಗೆ ಹೇಳಿರುವುದಿಲ್ಲ. ಮೂಲ ಸ್ವಇಚ್ಛಾ ನಿವೃತ್ತಿ ತಿಳುವಳಿಕೆಯಲ್ಲಿ ವಿವರಿಸಿದ ಸಂದರ್ಭಗಳು ಬದಲಾವಣೆಯಾಗಿರುವ ಬಗ್ಗೆ ಹೇಳದಿರುವ ಸ್ವಇಚ್ಛಾ ನಿವೃತ್ತಿ ಹಿಂತೆಗೆದುಕೊಳ್ಳುವ ತಿಳುವಳಿಕೆ ಅರ್ಜಿಯನ್ನು ಸ್ವೀಕರಿಸಲು ಬರುವುದಿಲ್ಲ. 9–4–2008 ದಿನಾಂಕ/ಹೊಂದಿದ ಅರ್ಜಿಯನ್ನು ದಿ:11–4–2008 ರಂದು ಮಾತ್ರ ಅಂದರೆ ಉದ್ದೇಶಿತ ಸ್ವಇಚ್ಛಾ ನಿವೃತ್ತಿ ದಿ:11–4–2008 ರ ನಂತರ ಸಲ್ಲಿಸಲಾಗಿದೆ. ಆದುದರಿಂದ 9–4–2008 ದಿನಾಂಕ/ಹೊಂದಿದ ದಿ:11–4–2008 ರಂದು ಸ್ವೀಕರಿಸಲ್ಪಟ್ಟ ಮನವಿಯಲ್ಲಿನ ಕೋರಿಕೆಯನ್ನು ಒಪ್ಪಲು ಬರುವುದಿಲ್ಲ..

ಮೇಲ್ಕಂಡ ಸಂದರ್ಭಗಳ ಹಿನ್ನಲೆಯಲ್ಲಿ ಶ್ರೀ ಎಂ.ವಿ. ತಿಮ್ಮಯ್ಯ, ಜಂಟಿ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ರವರ ಸ್ವಇಚ್ಚಾ ನಿವೃತ್ತಿ ಕೋರಿಕೆಯನ್ನು ದಿ:10–4–2008 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲು ಸರ್ಕಾರ ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಕಇ 142 ಪಕಸೇ 2008, ಬೆಂಗಳೂರು, ದಿನಾಂಕ:27ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರಾಗಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಎಂ.ವಿ. ತಿಮ್ಮಯ್ಯ, ಜಂಟಿ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 285(1)(ಎ)ರ ಅನ್ವಯ ದಿನಾಂಕ:10–4–2008ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಸ್ವಇಚ್ಛಾ ನಿವೃತ್ತ ಹೊಂದಲು ಈ ಕೆಳಕಂಡ ಷರತ್ತಿಗೆ ಒಳಪಟ್ಟು ಸರ್ಕಾರವು ಅನುಮತಿ ನೀಡಿ ಆದೇಶಿಸಿದೆ.

"ಸದರಿ ಅಧಿಕಾರಿಯಿಂದ ಸರ್ಕಾರಕ್ಕೆ ಬರಬೇಕಾದ ಯಾವುದೇ ಬಾಕಿ ಹಣ ಇದ್ದಲ್ಲಿ ಅದನ್ನು ಅವರ ಸ್ವಇಚ್ಛಾ ನಿವೃತ್ತಿಯಿಂದ ಲಭ್ಯವಾಗುವ ಡಿ.ಸಿ.ಆರ್.ಜಿ ಹಣದಿಂದ ಕಟಾಯಿಸತಕ್ಕದು"

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 961

**ಎ.ಎಂ. ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ–1

ಸಮಾಜ ಕಲ್ಯಾಣ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಸ್. ಪರಶಿವಮೂರ್ತಿ, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಬೆಂಗಳೂರು ಅವರ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸುವ ಕುರಿತು.

**ಉಲ್ಲೇಖ:**
1. ಸರ್ಕಾರದ ಆದೇಶ ನಂ ಲಾ 173 ಪಿಪಿಇ 94, ದಿನಾಂಕ:22–8–1994
2. ಸರ್ಕಾರದ ಅದೇಶ ನಂ ಲಾ 173 ಪಿಪಿಇ 94 ದಿನಾಂಕ:18.1.1996
3. ಸರ್ಕಾರದ ಆದೇಶ ನಂ. ಒಇ 661 ಪಿಪಿಇ 2005, ದಿನಾಂಕ:1.9.2006
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ ಸಿಶಾ–1/105/94–95, ದಿನಾಂಕ;7.5.2007.

**ಪ್ರಸ್ತಾವನೆ:**

ಶ್ರೀ ಎಸ್. ಪರಶಿವಮೂರ್ತಿ, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತ ಕಛೇರಿ, ಬೆಂಗಳೂರು ಅವರು ಈ ಹಿಂದೆ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಎಂ ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಸೋಮವಾರಪೇಟೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಮಡಿಕೇರಿ ಲೋಕಾಯುಕ್ತ ಪೊಲೀಸ್ ಠಾಣಾ ಕ್ರೈಂ ನಂ 5/94 ರಲ್ಲಿ ಲಂಚ ಆರೋಪದ ಪ್ರಕರಣ ದಾಖಲಾಗಿದ್ದರಿಂದ ಮೇಲೆ (1)ರ ಸರ್ಕಾರದ ಆದೇಶದಲ್ಲಿ ಅಮಾನತ್ತಿನಲ್ಲಿ ಇಡಲಾಗಿತ್ತು.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಸದರಿ ಅಧಿಕಾರಿಯವರ ಅಮಾನತ್ತು ಆದೇಶವನ್ನು ಅಭಿಯೋಜನದ ವಿಷಯ (Prosecution) ಬಾಕಿ ಇಟ್ಟು ರದ್ದುಗೊಳಿಸಿ ಗೌರಿಬಿದನೂರು ಮುನ್ಸೀಫ್ ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಿಸಲಾಗಿತ್ತು. ಸದರಿ ಅಧಿಕಾರಿಯವರು ಸದರಿ ಹುದ್ದೆಯ ಪ್ರಭಾರವನ್ನು ದಿನಾಂಕ;31.1.1996 ರ ಪೂರ್ವಾಹ್ನ ದಂದು ವಹಿಸಿಕೊಂಡಿರುತ್ತಾರೆ.

ಶ್ರೀ ಎಸ್. ಪರಶಿವಮೂರ್ತಿ ಇವರ ಮೇಲೆ ಮಡಿಕೇರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ದಾಖಲಾಗಿದ್ದ ಪ್ರಕರಣದಲ್ಲಿ ನ್ಯಾಯಾಲಯವು ಇವರನ್ನು ಆರೋಪದಿಂದ ಮುಕ್ತಗೊಳಿಸಿ ತೀರ್ಪನ್ನು ನೀಡಿರುತ್ತದೆ. ಆದುದರಿಂದ ಸದರಿ ಅಧಿಕಾರಿಯವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ:4.8.1992 ರಿಂದ 3.5.1995 ರವರೆಗೆ ವಿಸ್ತರಿಸಿ, ದಿನಾಂಕ:4.5.1995 ರಿಂದ ತೃಪ್ತಿಕರವೆಂದು ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ಘೋಷಿಸಲಾಗಿದೆ ಮತ್ತು ಇವರಿಗೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಗೆ ಪದೋನ್ನತಿಯನ್ನು ಸಹ ನೀಡಲಾಗಿದೆ.

ಮೇಲೆ ಓದಲಾದ (4)ರ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ತಮ್ಮ ಪತ್ರದಲ್ಲಿ ಶ್ರೀ ಎಸ್. ಪರಶಿವಮೂರ್ತಿ ಇವರಿಗೆ ದಿನಾಂಕ:22.8.1994 ರಿಂದ 30.1.1996 ರ ವರೆಗಿನ ನಿಲಂಬನಾಅವಧಿಯನ್ನು ಕರ್ನಾಟಕ ನಾಗರೀಕ ಸೇವೆಗಳು ನಿಯಮ 100 (3) ರ ಅನುಸಾರ ಸಕ್ರಮಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ. ಒಇ 255 ಪಿಪಿಇ 2007, ಬೆಂಗಳೂರು, ದಿನಾಂಕ:20ನೇ ಜೂನ್ 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರಿ ಶ್ರೀ ಎಸ್. ಪರಶಿವಮೂರ್ತಿ, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಬೆಂಗಳೂರು ಇವರ ದಿನಾಂಕ:22.8.1994 ರಿಂದ 30.1.1996 ರ ವರೆಗಿನ ಅಮಾನತ್ತಿನ ಅವಧಿಯನ್ನು (ಎರಡೂ ದಿನಗಳು ಸೇರಿ) 1957ರ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 100 (3) ರನ್ವಯ ಎಲ್ಲಾ ಉದ್ದೇಶಗಳಿಗೂ ಕರ್ತವ್ಯದ ಅವಧಿ ಎಂಬುದಾಗಿ ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 962

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ಸಮಾಜ ಕಲ್ಯಾಣ ಸಚಿವಾಲಯ**

**ತಿದ್ದೋಲೆ**

**ಸಂಖ್ಯೆ:ಸಕಇ 142 ಪಕಸೇ 2008, ಬೆಂಗಳೂರು, ದಿನಾಂಕ:27ನೇ ಮೇ 2008**

ಸರ್ಕಾರದ ಆದೇಶ ಸಂಖ್ಯೆ:ಸಕಇ 142 ಪಕಸೇ 2008, ದಿ:27–5–2008 ರ ಸರ್ಕಾರಿ ಆದೇಶದಲ್ಲಿ ಓದಲಾಗಿದೆ ಎಂಬ ಭಾಗದಲ್ಲಿ ಕ್ರಮ ಸಂಖ್ಯೆ: (2) ರಲ್ಲಿ "ದಿ:8–4–2008 ಮತ್ತು 9–4–2008" ಎಂದು ನಮೂದಿಸಿರುವ ಬದಲಿಗೆ ದಿ:8–4–2008 ಮತ್ತು ದಿ:11–4–2008" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 972

**ಎ.ಎಂ. ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ–1

ಸಮಾಜ ಕಲ್ಯಾಣ ಇಲಾಖೆ

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ:** ಬಾಗಲಕೋಟೆ ಜಿಲ್ಲೆಯಲ್ಲಿ ಹಿರಿಯ ನಾಗರೀಕರ ಸಹಾಯವಾಣಿ ಕೇಂದ್ರ ತೆರೆಯಲು ಶ್ರೀ ಕನಕದಾಸ ಗ್ರಾಮೀಣಭಿವೃದ್ಧಿ ಸಂಸ್ಥೆ, ಬಾಗಲಕೋಟೆ ಈ ಸಂಸ್ಥೆಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಮಮಇ:265:ಎಸ್‌ಜೆಡಿ 2004:ದಿ:27.11.2004

2. ಸರ್ಕಾರಿ ಆದೇಶ ಸಂಖ್ಯೆ:ಮಮಇ:156:ಪಿಹೆಚ್‌ಪಿ:2006[3] ದಿ:28.8.2006

3. ಸರ್ಕಾರಿ ಆದೇಶ ಸಂಖ್ಯೆ;ಮಮಇ 244:ಪಿಹೆಚ್‌ಪಿ:2007[5] ದಿ:21.8.2007

4. ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರೀಕ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ:ನಿಅಕ:05:ಹಿ.ನಾ:ಸವಾಣಿ:ಕೇಂದ್ರ ಬೀದರ್ 2007–08_12:965/ದಿನಾಂಕ:22.12.2007

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ:[1] ರಿಂದ [3]ರಲ್ಲಿ ಓದಲಾದ ಆದೇಶದಲ್ಲಿ ಬೆಂಗಳೂರು ಬೆಳಗಾಂ, ಮೈಸೂರು, ಹುಬ್ಬಳ್ಳಿ, ಬಳ್ಳಾರಿ, ಶಿವಮೊಗ್ಗ ದಾವಣಗೆರೆ, ರಾಯಚೂರು, ಬಾಗಲಕೋಟೆ ಬೀದರ್ ಧಾರವಾಡ, ಗುಲ್ಬರ್ಗಾ ಕೋಲಾರ ಮತ್ತು ತುಮಕೂರು ಜಿಲ್ಲೆಯ ಕೇಂದ್ರ ಸ್ಥಾನದಲ್ಲಿ ಜಿಲ್ಲಾ ಪೊಲೀಸ್ ಆಯುಕ್ತರ ಕಛೇರಿಯಲ್ಲಿ ಆರಕ್ಷಕ ಸಹಾಯೋಗದೊಂದಿಗೆ ಪ್ರತಿ ಕೇಂದ್ರಕ್ಕೆ ವಾರ್ಷಿಕ ರೂ. 3,95,000/– ಮೊತ್ತದಲ್ಲಿ ಹಿರಿಯ ನಾಗರೀಕರಿಗಾಗಿ ಸಹಾಯವಾಣಿ ಕೇಂದ್ರವನ್ನು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಪ್ರಾರಂಭಿಸಿ ನಿರ್ವಹಿಸಲು ಅನುಮೋದನೆ ನೀಡಲಾಗಿದೆ.

ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ಇಲಾಖೆ, ಇವರು ಮೇಲೆ ಓದಲಾದ ಕ್ರಮಸಂಖ್ಯೆ[4] ರ ಪತ್ರದಲ್ಲಿ ಬಾಗಲಕೋಟೆ ಜಿಲ್ಲೆಯಲ್ಲಿ ಹಿರಿಯ ನಾಗರಿಕರಿಗೆ ಸಹಾಯವಾಣಿ ಕೇಂದ್ರವನ್ನು ತೆರೆಯಲು 7 ಸಂಸ್ಥೆಗಳು ಪ್ರಸ್ತಾವನೆಗಳನ್ನು ಸಲ್ಲಿಸಿದ್ದು, ಇವುಗಳಲ್ಲಿ ಶ್ರೀ ಕನಕದಾಸ ಗ್ರಾಮೀಣ ಅಭಿವೃದ್ಧಿ ಸಂಸ್ಥೆ [ರಿ] ತೆಗ್ಗಿ ಬೀಳಗಿ ತಾಲ್ಲೂಕ್ ಬಾಗಲಕೋಟೆ ಜಿಲ್ಲೆ ಹಾಗೂ ಶ್ರೀ ಬಸವೇಶ್ವರ ವಿದ್ಯಾವರ್ಧಕ ಸಂಘ ಗ್ರಾಮೀಣ ಅಭಿವೃದ್ಧಿ ಪ್ರತಿಷ್ಠಾನ, ಬಾಗಲಕೋಟೆ ಈ ಎರಡು ಸಂಸ್ಥೆಗಳ ಪೈಕಿ ಒಂದು ಸಂಸ್ಥೆಗೆ ಹಿರಿಯ ನಾಗರೀಕರ ಸಹಾಯವಾಣಿ ಕೇಂದ್ರವನ್ನು ಪೊಲೀಸ್ ಇಲಾಖೆಯ ಸಹಾಯೋಗದೊಂದಿಗೆ ನಡೆಸಲು ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಗಳನ್ನು ಪರಿಶೀಲಿಸಲಾಗಿ ಶ್ರೀ ಕನಕದಾಸ ಗ್ರಾಮೀಣ ಅಭಿವೃದ್ಧಿ ಸಂಸ್ಥೆ [ರಿ] ತೆಗ್ಗಿ ಬೀಳಗಿ ತಾಲ್ಲೂಕ್ ಬಾಗಲಕೋಟೆ ಜಿಲ್ಲೆ ಈ ಸಂಸ್ಥೆಯು 23.10.2000ನೇ ಸಾಲಿನಿಂದ ಸಂಸ್ಥೆಯು ಪೂರ್ವ ಪ್ರಾಥಮಿಕ ಶಾಲೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಅನುದಾನದಡಿ ಶಿಶುಪಾಲನಾ ಕೇಂದ್ರ, ನಿರ್ಗತಿಕ ಮಕ್ಕಳ ಕುಟೀರಗಳನ್ನು ಚೆನ್ನಾಗಿ ನಡೆಸಿಕೊಂಡು ಹೋಗುತ್ತಿದ್ದು, 2007–08ನೇ ಸಾಲಿಗೆ ಸದರಿ ಸಂಸ್ಥೆಗೆ ವೃದ್ಧಾಶ್ರಮ ಮಂಜೂರಾಗಿದ್ದು, ತೃಪ್ತಿಕರವಾಗಿ ಕಾರ್ಯನಿರ್ವಹಿಸುತ್ತಿರುವುದನ್ನು ಮನಗಂಡು ಇಂತಹ ಯೋಜನೆಗಳಲ್ಲಿ ಅನುಭವ ಇರುವುದನ್ನು ಸಹ ಗಮನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಮಮಇ 175 ಪಿಹೆಚ್‌ಪಿ 2008, ಬೆಂಗಳೂರು, ದಿನಾಂಕ:17ನೇ ಜೂನ್ 2008**

ಬಾಗಲಕೋಟೆ ಜಿಲ್ಲೆಯಲ್ಲಿ ಪೊಲೀಸ್ ಅಧೀಕ್ಷಕರ ಕಛೇರಿಯ ಆವರಣದಲ್ಲಿ ಹಿರಿಯ ನಾಗರೀಕರ ಸಹಾಯವಾಣಿ ಕೇಂದ್ರ ಪ್ರಾರಂಭಿಸಿ ನಿರ್ವಹಿಸಲು ಶ್ರೀ ಕನಕದಾಸ ಗ್ರಾಮೀಣ ಅಭಿವೃದ್ಧಿ ಸಂಸ್ಥೆ, ತಗ್ಗಿ ಬೀಳಗಿ ತಾಲ್ಲೂಕ್, ಬಾಗಲಕೋಟೆ ಈ ಸಂಸ್ಥೆಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಸರ್ಕಾರಿ ಆದೇಶ ಸಂಖ್ಯೆ:ಮಮಇ 265:ಎಸ್ ಜೆಡಿ 2004 ದಿನಾಂಕ:27.11.2004 ರಲ್ಲಿರುವ ಷರತ್ತುಗಳನ್ನು ಸದರಿ ಸಂಸ್ಥೆಯು ಪಾಲಿಸತಕ್ಕದ್ದು.

ಹಿರಿಯ ನಾಗರೀಕರ ಸಹಾಯವಾಣಿಯನ್ನು ಪ್ರಾರಂಭಿಸಿದ ನಂತರ ತನಿಖಾ ವರದಿಯೊಂದಿಗೆ ಅನುದಾನ ಬಿಡುಗಡೆಗೆ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು. ಮತ್ತು ಇದಕ್ಕೆ ತಗಲುವ ವೆಚ್ಚವನ್ನು ಹಿರಿಯ ನಾಗರಿಕರ ನೀತಿ ಲೆಕ್ಕ ಶೀರ್ಷಿಕೆ 2235–02–104–2–04 ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10–7–96ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪತ್ರಾಯೋಜಿಸಲಾಗಿರುವ ಅಧಿಕಾರದಡಿಯಲ್ಲಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 963

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## HEALTH AND FAMILY WELFARE SECRETARIAT

**Sub :** Contracting -out Mobile Health Clinics-reg

**Read :** Govt Order No. HFW/KHSDRP/Sect/OM-2/2007 Bangalore dt.31.3.2008

**Preamble:**

In the Govt Order read above 6 Mobile Health Clinics have been contracted-out under Public-Private Partnership in the 1st phase, under Karnataka Health System Development and Reform Project, for a total negotiated cost as shown under.

| Sl. No | Name of the firm | Name of Selected Taluk and District | No. of Mobile Health Clinics | Quoted Amount for 2 years in Rs | Total negotiated cost for 2 years in Rs. |
|---|---|---|---|---|---|
| 1 | M/s Karuna Trust (Affiliated to Vivekananda Girijana Kalyana Kendra) Jayanagar, Bangalore-560041 Ktrust @vsnl.net | Chamarajnagar Taluk, Chamarajnagar District | 1 | 23.04.000.00 | 23,04,000.00 |

| Sl. No | Name of the firm | Name of Selected Taluk and District | No. of Mobile Health Clinics | Quoted Amount for 2 years in Rs | Total negotiated cost for 2 years in Rs. |
|---|---|---|---|---|---|
| 2 | M/s Udbhav Educational and Rural Development Society ® Shri Krishna Bhavan Bidg Skpt Road Hanur, Kollegal-571439 Dist Chamrajnagar | Kolegal Taluk, Chamrajnagar District | 1 | 40.56.400.00 | 29.94.200.00 |
| 3 | M/s Manipal Health System Pvt. Ltd. Rustombag, Airport Road, Bangalore-560017 | Bhatkal Taluk,Uttara Kannada District | 1 | 86,65,000,00 | 33,00,000,00 |
| 4 | M/s Family Planning Association India, Shimoga Branch, 1st Stage Malleshwara nagar Shimoga-577202 fpaishimoga @ sancharnet in | Sagar Taluk, Shimoga District | 1 | 36,00,000,00 | 30,00,000,00 |
| 5 | M/s Rotary Tarikere Rtn T. Obalappa, Jeevavimanagar Lingadahalli Road Tarikere-577228 | Tarikere Taluk Chikmagalur District | 1 | 49.10.,400,00 | 27,80,000.00 |
| 6 | M/s Scodwes ® (Sahyadri Community Development and Women Empowerment Society)Near Higher Primary School Puttenamane Road, Maritikoppa, Sirsi-581401 scodwes @ rediffmail com. | Kumta Taluk,Uttara Kannada District | 1 | 36,04,800.00 | 28.90.400.00 |
| | Total | | 6 | | 1,72,68,600.00 |

The existing human resource required for running the Mobile Health Clinic is a Doctor a staff Nurse, a Pharmacist and a Group-D as per the designed Terms of Reference The Programme Steering Committee in its 6th metting held on 14.5.2008 decided to make provision for another post of a Staff Nurse in the Moblie Health Clinic in order to facilitate early detection of HIV aids infected patients and for ICTC counselling. This is likely to improve the quality of primary health care and integration of HIV/AIDS programme at the grass-root level. The Steering Committee has also approved the marginal financial implication of the same. The Project will be reimbursing this increase in expenditure to the firm that will provide the Mobile Health Clinic.

**Govt Order No: HFW/KHSDRP/Sect/OM-2/2007, Bangalore, Dated:11th June 2008**

Under the circumstances mentioned in the preamble, Government are hereby pleased to approve the services of a Staff Nurse in addition to the existing human resource structure planned in the Mobile Health Clinic, exclusively for ICTC counselling and any other HIV/AIDS related works. Karnataka Health System Development and Reform Project shall bear the extra cost that is required for the additional services and reimburse the same to the firm that will run the Mobile Health Clinics at a revised cost as given below.

| Sl. No | Name of the firm | Name of Selected Taluk and District | No. of Mobile Health Clinics | Total negotiated cost for 2 years (in Rs) | Revised cost after addition of 1 staff Nurse (In Rs) |
|---|---|---|---|---|---|
| 1 | M/s Karuna Trust, (Affiliated to Vivekananda Girijan Kalyana Kendra) Jayanagar, Bangalore-560041 ktrust @vsnl.net | Chamarajnagar Taluk, Chamarajnagar District | 1 | 23.04.000.00 | 23,60,000.00 |
| 2 | M/s Udbhav Educational and Rural Development Society ® Shri Krishna Bhavan Bidg Skpt Road Hanur, Kollegal-571439 Dist Chamrajnagar | Kolegal Taluk, Chamrajnagar District | 1 | 29,94,200.00 | 31,86,200.00 |
| 3 | M/s Manipal Health System Pvt. Ltd. Rustombag, Airport Road, Bangalore-560017 | Bhatkal Taluk,Uttara Kannada District | 1 | 33,00,000,00 | 35,04,000,00 |
| 4 | M/s Family Planning Association India, Shimoga Branch, 1st Stage Malleshwara nagar Shimoga-577202 fpaishimoga @ sancharnet in | Sagar Taluk, Shimoga District | 1 | 30,00,000,00 | 31,43,840.00 |

| 1 | 2 | 3 | 4 | 5 | 6 |
|---|---|---|---|---|---|
| 5 | M/s Rotary Tarikere Rtn Prareen Nahar B.H. Road Tarikere-577228 | Tarikere Taluk Chikmagalur District | 1 | 27,80,000.00 | 30.58.400.00 |
| 6 | M/s Scodwes ® (Sahyadri Community Development and Women Empowerment Society)Near Higher Primary School Puttenamane Road, Maritikoppa, Sirsi-581401 scodwes @ rediffmail com. | Kumta Taluk,Uttara Kannada District | 1 | 28,90,400.00 | 29,72,000.00 |
| | Total | | 6 | 1,72,68,600.00 | 1,83,24,600.00 |

The above expenditure shall be debited under the Head of Account "2210-06-800-0-85-059 (P) SICF Other Expenses" for the corresponding financial year.

By Order and in the name of the Governor of Karnataka,

**SUSHAMA GODBOLE**

P.R. 964

Deputy Secretary to Govt. KHSDRP

Helath and Family Welfare Department

**ಸಹಕಾರ ಸಚಿವಾಲಯ**

**ವಿಷಯ:** ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಮಳವಳ್ಳಿ ತಾಲ್ಲೂಕು, 2006–07ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಕಾಲಾವಧಿ ವಿಸ್ತರಿಸುವ ಬಗ್ಗೆ

**ಓದಲಾಗಿದೆ:** ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಕೇಂದ್ರ ಕಛೇರಿ, ಬೆಂಗಳೂರು, ಇವರ ಪತ್ರ ಸಂಖ್ಯೆ:ಎಲ್‌ಡಿಬಿ –2/151/ವಾಮಸಭೆ/2007–08 ದಿನಾಂಕ:2–5–2008

**ಪ್ರಸ್ತಾವನೆ:**

2006–07ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಿ ಪುನಃ 2007–08ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ಸೆಪ್ಟೆಂಬರ್ 2008ರೊಳಗೆ ನಡೆಸಬೇಕಾಗಿರುವುದರಿಂದ ಆರ್ಥಿಕವಾಗಿ ನಷ್ಟವಾಗುವುದರಿಂದ 2006–07ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು 2007–08ನೇ ಸಾಲಿಗೆ ನಡೆಸುವಾಗ ಸೆಪ್ಟೆಂಬರ್ 2008ರೊಳಗೆ ನಡೆಸುವಂತೆ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಮಳವಳ್ಳಿ ತಾಲ್ಲೂಕು. ಇದರ ಅಧ್ಯಕ್ಷರು ಅನುಮತಿಯನ್ನು ಕೋರಿರುತ್ತಾರೆಂದು ಬ್ಯಾಂಕಿನ ಪ್ರಸ್ತಾವೆಯನ್ನು ಪರಿಗಣಿಸಿ ಸದರಿ ಸಂಘಕ್ಕೆ ಜುಲೈ 2008 ರೊಳಗಾಗಿ ಸರ್ವ ಸದಸ್ಯರ ಸಭೆಯನ್ನು ನಡೆಸಲು ಅನುಮತಿ ನೀಡುವಂತೆ ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಒ 83 ಸಿಎಲ್‌ಎಮ್ 2008, ಬೆಂಗಳೂರು, ದಿನಾಂಕ:18ನೇ ಜೂನ್ 2008**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಮಳವಳ್ಳಿ ತಾಲ್ಲೂಕು, ಇದರ 2006–07ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು

ದಿನಾಂಕ:30.9.2008 ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ.

**27ರ ಪ್ರಕರಣದಲ್ಲಿ:**

27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಹನ್ನೆರಡು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:**

ಪ್ರಕರಣ 27 (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ :30.9.2008 ವರೆಗೆ ಜಾರಿಯಲ್ಲಿರತಕ್ಕದ್ದು.ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 965

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

**ವಿಷಯ:** ಕೆಸಿಸಿ ಬ್ಯಾಂಕ್ ಲಿ., ಧಾರವಾಡ ಇದರ ಆಡಳಿತಗಾರರ ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶದ ಸಂಖ್ಯೆ:ಸಿಎಂಡಬ್ಲ್ಯೂ 125 ಸಿಎಲ್ಎಂ 2005 ದಿನಾಂಕ:2.8.2005

2. ಸರ್ಕಾರದ ಆದೇಶದ ಸಂಖ್ಯೆ:ಸಿಒ 99 ಸಿಎಲ್ ಎಂ 2006 ದಿನಾಂಕ:24.7.2006

3. ಸರ್ಕಾರದ ಆದೇಶದ ಸಂಖ್ಯೆ ಸಿಒ 125 ಸಿಎಲ್ಎಂ 2007, ದಿನಾಂಕ:18.6.2007

4. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಸಿಆರ್‌ಡಿ/ಸಿಎಬಿ–1/17/2006–07, ದಿನಾಂಕ :7.6.2007

**ಪ್ರಸ್ತಾವನೆ:**

ಕೆ.ಸಿ.ಸಿ. ಬ್ಯಾಂಕ್ ಲಿ., ಧಾರವಾಡ ಇದರ ಅವ್ಯವಹಾರಗಳಿಗೆ ಸಂಬಂಧಿಸಿದಂತೆ, ಸದರಿ ಬ್ಯಾಂಕಿನ ಆಡಳಿತ ಮಂಡಳಿಯನ್ನು ರದ್ದುಪಡಿಸಿ ದಿನಾಂಕ:10–12–2001 ರಂದು ಆಡಳಿತಗಾರರನ್ನು ನೇಮಿಸಲಾಗಿದ್ದು ಮೇಲೆ ಓದಲಾದ (1)(2) ಮತ್ತು (3)ರ ಆದೇಶಗಳಲ್ಲಿ ಸದರಿ ಬ್ಯಾಂಕಿನ ಆಡಳಿತಗಾರರ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 121 ರಡಿ ಸರ್ಕಾರಕ್ಕೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಪ್ರಕರಣ 30(1)ಕ್ಕೆ ಮಾರ್ಪಾಟು ಮಾಡಲಾಗಿರುತ್ತದೆ. ಆಡಳಿತಾಧಿಗಾರರ ಅವಧಿಯು ದಿನಾಂಕ;10.6.2008ರವರೆಗೆ ಇರುತ್ತದೆ. ವ್ಯವಸ್ಥಾಪಕರು,. ಕೆ.ಸಿ.ಸಿ ಬ್ಯಾಂಕ್ ಧಾರವಾಡ ಇವರು ಪ್ರಸ್ತಾವೆ ಸಲ್ಲಿಸಿ 2008–09 ರಿಂದ 2012–13ನೇ ಸಾಲಿನ ಚುನಾವಣೆ ನಡೆಸಲು 31.3.2008ರ ನಂತರ ಲೆಕ್ಕ ಪತ್ರಗಳನ್ನು ತಯಾರಿಸಿ ಸಾಲ ವಸೂಲಾತಿ ಮಾಹಿತಿ ಪಡೆದು ಅರ್ಹ ಮತದಾರರ ಯಾದಿ ಸಿದ್ದಪಡಿಸಲಾಗಿತ್ತೆಂದೂ ಅಷ್ಟರಲ್ಲಿ ಕರ್ನಾಟಕ ವಿಧಾನಸಭೆ ಚುನಾವಣೆ ಘೋಷಣೆಯಾಗಿ ನೀತಿ ಸಂಹಿತೆ ಜಾರಿಯಾದ್ದರಿಂದ ಮತ್ತು ಬ್ಯಾಂಕಿನ ಆಡಳಿತಗಾರರಾದ ಜಿಲ್ಲಾಧಿಕಾರಿಗಳು ಬಿಡುವಿಲ್ಲದ ಚುನಾವಣಾ ಕಾರ್ಯದಲ್ಲಿ ನಿರತರಾಗಿದ್ದರಿಂದ ತಾಂತ್ರಿಕವಾಗಿ ಬ್ಯಾಂಕಿನ ಆಡಳಿತ ಮಂಡಳಿ ಚುನಾವಣೆ ಪ್ರಕ್ರಿಯೆಯನ್ನು ಜರುಗಿಸಲು ವಿಳಂಬವಾಗಿರುತ್ತೆಂದೂ ಹಾಲಿ ಆಡಳಿತಾರರ ಅವಧಿಯು ದಿನಾಂಕ:10–6–2008ರವರೆಗೆ ಇದ್ದು ಬ್ಯಾಂಕಿನ ಚುನಾವಣೆ ನಡೆಸಿ ಆಡಳಿತ ಮಂಡಳಿ ರಚನೆಯಾಗಲು ಕನಿಷ್ಟ 45 ದಿನಗಳ ಕಾಲಾವಕಾಶ ಬೇಕಾಗಿರುವುದರಿಂದ ಆಡಳಿತಗಾರರ ಅವಧಿಯನ್ನು ಕನಿಷ್ಟ 6 ತಿಂಗಳವೆರೆಗೆ ವಿಸ್ತರಿಸಲು ಕ್ರಮ ಕೋರಿರುತ್ತಾರೆಂದು ಸದರಿ ಬ್ಯಾಂಕಿನ ಆಡಳಿತಗಾರರ ಅವಧಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ದಿನಾಂಕ:11.6.2008 ರಿಂದ ಡಿಸೆಂಬರ್ ಅಂತ್ಯದವರೆಗೂ ವಿಸ್ತರಿಸುವಂತೆ ಸಹಕಾರ ಸಂಘಗಳ ನಿಬಂಧಕರು ಮೇಲೆ ಓದಲಾದ (4)ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಒ 89 ಸಿಎಲ್‌ಎಂ 2008, ಬೆಂಗಳೂರು, ದಿನಾಂಕ:18ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನಲೆಯಲ್ಲಿ ಕೆಸಿಸಿ ಬ್ಯಾಂಕ್ ನಿ., ಧಾರವಾಡ ಇದರ ಆಡಳಿತಗಾರರ ಅವಧಿಯನ್ನು ದಿನಾಂಕ:11.6.2008 ರಿಂದ 31.12.2008 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30 (1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಕೆಸಿಸಿ ಬ್ಯಾಂಕ್ ಲಿ., ಧಾರವಾಡ ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ. ಎಂದರೆ:

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30 ಉಪಪ್ರಕರಣ (1)ರಲ್ಲಿನ "ಒಂದು ವರ್ಷ" ಎಂಬ ಪದಗಳಿಗೆ ಬದಲಾಗಿ "ಎಪ್ಪತ್ತೊಂಬತ್ತು ತಿಂಗಳು" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

ಸೂಚನೆ: 2) ಪ್ರಕರಣ 30 ಉಪ–ಪ್ರಕರಣ (1) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:31.12.2008 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 30 ಉಪ–ಪ್ರಕರಣ (1)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 966

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ**

**ವಿಷಯ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಮೊದಲನೇ ಹಂತದ ಮತ್ತು ಎರಡನೇ ಹಂತದ ಒಟ್ಟು ಐದು ಜಿಲ್ಲೆಗಳಿಗೆ ಬಿಡುಗಡೆ ಮಾಡಲಾದ ಅನುದಾನಕ್ಕೆ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ:** ಕೇಂದ್ರ ಸರ್ಕಾರದ ಪತ್ರ ಸಂಖ್ಯೆ ಜೆ–11011/16/2007–NREGA Sl.No75 ದಿನಾಂಕ:14.5.2008

**ಪ್ರಸ್ತಾವನೆ:**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ 2008–09ನೇ ಸಾಲಿಗೆ, ಕೇಂದ್ರ ಸರ್ಕಾರವು ಕಾರ್ಯಕ್ರಗಳ ಅನುಷ್ಠಾನಕ್ಕಾಗಿ ರೂ. 2940.00 ಲಕ್ಷಗಳನ್ನು ತನ್ನ ಪಾಲಿನ ಕಂತಿನ ಅನುದಾನವನ್ನು ಮೊದಲನೇ ಹಾಗೂ ಎರಡನೇ ಹಂತದ 5 ಜಿಲ್ಲೆಗಳಾದ ದಾವಣಗೆರೆ ಗುಲ್ಬರ್ಗಾ, ರಾಯಚೂರು, ಹಾಸನ ಮತ್ತು ಶಿವಮೊಗ್ಗ ಇವುಗಳಿಗೆ ಉಲ್ಲೇಖಿತ ಪತ್ರದಲ್ಲಿ ನೇರವಾಗಿ ಬಿಡುಗಡೆ ಮಾಡಿ, ಕೂಡಲೇ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಆದೇಶಿಸಿರುತ್ತದೆ. ಪ್ರಚಲಿತ ವರ್ಷದಲ್ಲಿ ಸದರಿ ಯೋಜನೆಗೆ ಅನುದಾನವನ್ನು ರಾಜ್ಯದ ಆಯವ್ಯಯದಲ್ಲಿ ಒದಗಿಸಿದೆ. ರಾಜ್ಯ ಸರ್ಕಾರವು ಶೇಕಡಾ 10 ರಷ್ಟಿನ ತನ್ನ ಪಾಲಿನ ಅನುದಾನವಾದ ರೂ. 294.00 ಲಕ್ಷಗಳನ್ನು ಸದರಿ ಐದು ಜಿಲ್ಲೆಗಳಿಗೆ ಅನುಬಂಧದಲ್ಲಿ ನಮೂದಿಸಿದಂತೆ ಸಾಮಗ್ರಿಗಳ ಬಳಕೆಗಾಗಿ ವೆಚ್ಚ ಮಾಡಲು 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ಅನುದಾನದಿಂದ ಬಿಡುಗಡೆ ಮಾಡಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 42 ಉಖಾಯೋ 08, ಬೆಂಗಳೂರು, ದಿನಾಂಕ:11ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಮೊದಲನೇ ಹಂತದ ಮತ್ತು ಎರಡನೇ ಹಂತದ ಒಟ್ಟು ಐದು ಜಿಲ್ಲೆಗಳಿಗೆ ಬಿಡುಗಡೆ ಮಾಡಿರುವ ಅನುದಾನಕ್ಕೆ ಅನುಗುಣವಾಗಿ, ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವಾದ ರೂ. 294–00 ಲಕ್ಷಗಳನ್ನು (ರೂ ಎರಡು ಕೋಟಿ ತೊಂಬತ್ತನಾಲ್ಕು ಲಕ್ಷಗಳು ಮಾತ್ರ) ದಾವಣಗೆರೆ, ಗುಲ್ಬರ್ಗ, ರಾಯಚೂರು, ಹಾಸನ ಮತ್ತು ಶಿವಮೊಗ್ಗ ಈ ಐದು ಜಿಲ್ಲೆಗಳಿಗೆ ಅನುಬಂಧದಲ್ಲಿ ನಮೂದಿಸಿದಂತೆ 2008–09ನೇ ಸಾಲಿನಲ್ಲಿ ಸಾಮಾಗ್ರಿ ಘಟಕದ ವೆಚ್ಚಕ್ಕೆ ಮಾತ್ರ ಬಳಸಲು ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ:14–7–2005 ಮತ್ತು ಸರ್ಕಾರದ ಸುತ್ತೋಲೆ ಸಂಖ್ಯೆ ಅಇ 01 ಜಿಪ 07 ದಿನಾಂಕ:19–1–2007 ರಲ್ಲಿನ ಸೂಚನೆಗಳನ್ವಯ ಈ ಕೆಳಕಂಡ ಲೆಕ್ಕಶೀರ್ಷಿಕೆಯಡಿ ಪೇಯೀಸ್ ರಸೀದಿಯ ಮೇಲೆ ಖಜಾನೆಯಿಂದ ಅನುದಾನ ಪಡೆದು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್

ಖಾತೆಗೆ ಜಮೆ ಮಾಡಿ ವೆಚ್ಚವನ್ನು ಭರಿಸತಕ್ಕದ್ದು. 2008–09ನೇ ಸಾಲಿನ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಲೆಕ್ಕಶೀರ್ಷಿಕೆ 2505 ಗ್ರಾಮೀಣ ಉದ್ಯೋಗ 02–ಗ್ರಾಮೀಣ ಉದ್ಯೋಗ ಖಾತರಿ ಯೋಜನೆ 101–ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ 0–01 ಕರ್ನಾಟಕ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ–059 ಇತರೆ ಖರ್ಚು (ಯೋಜನೆ) (2505–02–101–0–01–059).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ, ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ:1–2–2007 ರಂದು ಅಧಿಸೂಚಿಸಿರುವ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು. ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಸಂಬಂಧಿಸಿದ ತಾಲ್ಲೂಕು ಪಂಚಾಯಿತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು, ಉಸ್ತುವಾರಿ, ಅನುಷ್ಠಾನ ಮತ್ತು ಜಾಗೃತಿ ಇವುಗಳನ್ನು ಚಲಾಯಿಸುವ ಸಂಪೂರ್ಣ ಜವಾಬ್ದಾರಿ ಅವರುಗಳದಾಗಿರುತ್ತದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಗ್ರಾಅಪ/261/ ಪಿಬಿಎಸ್/2008 ದಿನಾಂಕ:7–6–2008ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಎಂ. ಶಿರೋಳ್**

ನಿರ್ದೇಶಕರು,

ಯೋಜನೆ, ಸಮನ್ವಯ ಮತ್ತು ಮೇಲ್ವಿಚಾರಣಾ ಘಟಕ, ಹಾಗೂ

ಪ/ನಿ ಸರ್ಕಾರದ ಅಪರ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**Annexure to G.O.No. RDP/42/NRE/2008 Bangalore Dated:11-6-2008**

**Release of State Share of funds to phase-I and phase-II Districts under NREGA**

**(Rs in lakhs)**

| Sl. No | District | Central share vide letter dt:14-5-2008 | State share being released in this order |
|---|---|---|---|
| 1 | Davanagere | 174.00 | 17.400 |
| 2 | Gulburga | 671.00 | 67.100 |
| 3 | Raichur | 1095.00 | 109.500 |
| 4 | Hassan | 500.00 | 50.000 |
| 5 | Shimoga | 500.00 | 50.000 |
| | Total | 2940.00 | 294.000 |

**C.M. SHIROL**

Director (PPMU)

P.R. 968

Project, Planning Monitoring Unit

E/o Additional Secretary to Government

Rural Development & Pan Raj. Dept.,

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀಮತಿ ವಿ.ಎಸ್. ಪದ್ಮ, ಸಂಗೀತ ಶಿಕ್ಷಕರು, ಸರ್ಕಾರಿ ಬಾಲಿಕಾ ಪದವಿ ಪೂರ್ವ ಕಾಲೇಜು, ನ್ಯೂಟೌನ್, ಭದ್ರಾವತಿ, ಶಿವಮೊಗ್ಗ ಜಿಲ್ಲೆ, ಇವರಿಗೆ ವಿಭಾಗೀಯ ಅಧಿಕ್ಷಕರು (ಸಂಗೀತ, ನೃತ್ಯ, ನಾಟಕ) ಹುದ್ದೆಗೆ ಬಡ್ತಿ ನೀಡಿರುವುದನ್ನು ರದ್ದುಪಡಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 480 ಡಿಪಿಐ 2007, ದಿನಾಂಕ:26.11.2007

2. ಸರ್ಕಾರದ ನೋಟೀಸು ಪತ್ರ ಸಂಖ್ಯೆ:ಇಡಿ 480 ಡಿಪಿಐ 2007, ದಿನಾಂಕ:7.1.2008

3. ಶ್ರೀಮತಿ ಪದ್ಮ ವಿ.ಎಸ್., ಸಂಗೀತ ಶಿಕ್ಷಕರು, ಸರ್ಕಾರಿ ಬಾಲಿಕಾ ಪದವಿ ಪೂರ್ವ ಕಾಲೇಜು, ನ್ಯೂಟೌನ್, ಭದ್ರಾವತಿ, ಶಿವಮೊಗ್ಗ ಜಿಲ್ಲೆ, ರವರ ಮನವಿ ದಿನಾಂಕ:16.1.2008

4. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ರವರ ಪತ್ರ ಸಂಖ್ಯೆ:ಸಿ(6) ಸಂನ್ಯನಾ/ವಿಅ–ಬಡ್ತಿ–20/2007–08, ದಿನಾಂಕ:7.2.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಸರ್ಕಾರದ ದಿನಾಂಕ:26.11.2007 ರ ಅಧಿಸೂಚನೆಯಲ್ಲಿ ಶ್ರೀಮತಿ ವಿ.ಎಸ್. ಪದ್ಮ, ಸಂಗೀತ, ಶಿಕ್ಷಕರು, ಸರ್ಕಾರಿ ಬಾಲಿಕಾ ಪದವಿ ಪೂರ್ವ ಕಾಲೇಜು, ನ್ಯೂಟೌನ್, ಭದ್ರಾವತಿ, ಶಿವಮೊಗ್ಗ ಜಿಲ್ಲೆ, ರವರಿಗೆ ವಿಭಾಗೀಯ ಅಧೀಕ್ಷಕರು (ಸಂಗೀತ ನೃತ್ಯ, ನಾಟಕ) ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ಸಹ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು, ಇಲ್ಲಿಗೆ ಸ್ಥಳ ನಿಯುಕ್ತಿಗೊಳಿಸಲಾಗಿತ್ತು. ತದನಂತರ ಸದರಿ ಅಧಿಕಾರಿಗಳು ಬಡ್ತಿ ನೇಮಕಾತಿ ಮಾಡಿದ ಸ್ಥಳದಲ್ಲಿ ನಿಗಧಿತ ಅವಧಿಯೊಳಗೆ ಕರ್ತವ್ಯಕ್ಕೆ ಹಾಜರಾಗದ ಕಾರಣ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ದಿನಾಂಕ:7.1.2008 ರ ಕಾರಣ ಕೇಳುವ ನೋಟೀಸನ್ನು ಜಾರಿಮಾಡಲಾಯಿತು. ಮೇಲೆ ಓದಲಾದ (3)ರ ಮನವಿಯಲ್ಲಿ ಸದರಿ ಅಧಿಕಾರಿಗಳು ಅನಾರೋಗ್ಯದ ನಿಮಿತ್ತ ಚಿಕಿತ್ಸೆ ಪಡೆಯುತ್ತಿದ್ದು, ಇವರಿಗೆ ಸರ್ಕಾರದ ದಿನಾಂಕ;26.11.2007 ರ ಅಧಿಸೂಚನೆಯಲ್ಲಿ ನೀಡಿರುವ ಮುಂಬಡ್ತಿಯನ್ನು ರದ್ದುಪಡಿಸಲು ಕೋರಿರುತ್ತಾರೆ. ಮೇಲೆ ಓದಲಾದ (4)ರ ಪ್ರಸ್ತಾವನೆಯಲ್ಲಿ ಸದರಿ ಅಧಿಕಾರಿಗಳು ಸರ್ಕಾರದ ಅಧಿಸೂಚನೆಯನ್ವಯ ಬಡ್ತಿ ಹೊಂದಿರುವ ಕರ್ತವ್ಯದ ಮೇಲೆ ಹಾಜರಾಗಲು ಸಾಧ್ಯವಾಗುತ್ತಿಲ್ಲವೆಂದು ತಿಳಿಸಿರುವ ಕಾರಣ ಬಡ್ತಿಯನ್ನು ರದ್ದುಗೊಳಿಸಬೇಕೆಂದು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 480 ಡಿಪಿಐ 2007, ದಿನಾಂಕ:23ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ–4 'ಎ' ರನ್ವಯ ಶ್ರೀಮತಿ ವಿ.ಎಸ್. ಪದ್ಮ, ಸಂಗೀತ ಶಿಕ್ಷಕರು, ಸರ್ಕಾರಿ ಬಾಲಿಕಾ ಪದವಿ ಪೂರ್ವ ಕಾಲೇಜು, ನ್ಯೂಟೌನ್, ಭದ್ರಾವತಿ, ಶಿವಮೊಗ್ಗ ಜಿಲ್ಲೆ, ಇವರಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 480 ಡಿಪಿಐ 2007, ದಿನಾಂಕ:26.11.2007 ರಲ್ಲಿ ನೀಡಿರುವ ಮುಂಬಡ್ತಿಯನ್ನು ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 970

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು–1,2)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿರುವ ವೇತನ ಶ್ರೇಣಿ ರಹಿತ ವೈಜ್ಞಾನಾಧಿಕಾರಿ ಗ್ರೇಡ್–2 ಹುದ್ದೆಯ ಅವಧಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 19 ಸಸಿವಿ 2007 ದಿನಾಂಕ:22.3.2007

2. ಅನಧಿಕೃತ ಟಿಪ್ಪಣಿ ಸಂಖ್ಯೆ:ಅಪಜೀ 123 ಇಪಿಸಿ 2006 ದಿನಾಂಕ:26.3.2008

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿರುವ ವೇತನ ಶ್ರೇಣಿ ರಹಿತ ವೈಜ್ಞಾನಾಧಿಕಾರಿ ಗ್ರೇಡ್–2 ಹುದ್ದೆಯನ್ನು ದಿನಾಂಕ:24.4.2007 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿತ್ತು ಸದರಿ ಹುದ್ದೆಯ ಮುಂದುವರಿಕೆಯು ದಿನಾಂಕ:23.4.2008 ರಂದು ಮುಕ್ತಾಯವಾಗಿರುವುದರಿಂದಲೂ ಹಾಗೂ ಸದರಿ ಹುದ್ದೆಯಲ್ಲಿ ಅಧಿಕಾರಿಯೊಬ್ಬರು ಕಾರ್ಯನಿರ್ವಹಿಸುತ್ತಿರುವುದರಿಂದ ಸದರಿ ಹುದ್ದೆಯನ್ನು ಪುನಃ ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಮೇಲೆ (2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಅರಣ್ಯ ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆಯು ಕೋರಿದೆ. ಅದರಂತೆ ಸರ್ಕಾರವು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 450 ಸಅಸೇ 2008, ಬೆಂಗಳೂರು, ದಿನಾಂಕ:24ನೇ ಜೂನ್ 2008**

ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿರುವ ವೇತನ ಶ್ರೇಣಿ ರಹಿತ ವೈಜ್ಞಾನಾಧಿಕಾರಿ ಗ್ರೇಡ್–2 ಹುದ್ದೆಯೊಂದನ್ನು ವೇತನ ಶ್ರೇಣಿ ರಹಿತ ಹುದ್ದೆಯೆಂದು ಪರಿಗಣಿಸಿ

ದಿನಾಂಕ:24.4.2008 ರಿಂದ ಜಾರಿಗೆ ಬರುವಂತೆ ಪುನಃ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10–7–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 971

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಡಾ: ಎಂ. ಮೋಹನ ರೆಡ್ಡಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಎಸ್.ಎನ್.ಆರ್. ಆಸ್ಪತ್ರೆ, ಕೋಲಾರ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ:ಜೆಆರ್‌ಒ (1) 115/2006–07 ದಿನಾಂಕ:6.3.2007

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರದಲ್ಲಿ ಡಾ:ಎಂ. ಮೋಹನ ರೆಡ್ಡಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಎಸ್.ಎನ್.ಆರ್. ಆಸ್ಪತ್ರೆ, ಕೋಲಾರ ಇವರು 19.11.2003 ರಂದು ಸೇವೆಗೆ ಸೇರಿದ್ದು, ವೈಯಕ್ತಿಕ ಕಾರಣಗಳಿಂದ ದಿನಾಂಕ:25.8.2006 ರಲ್ಲಿ ರಾಜೀನಾಮೆ ಸಲ್ಲಿಸಿ ದಿನಾಂಕ:1.9.2006 ರಿಂದ ಕರ್ತವ್ಯಕ್ಕೆ ಗೈರುಹಾಜರಾಗಿರುವುದರಿಂದ ಸದರಿಯವರ ರಾಜೀನಾಮೆಯನ್ನು ದಿನಾಂಕ:1.9.2006 ರಿಂದ ಅನ್ವಯವಾಗುವಂತೆ ಅಂಗೀಕರಿಸಲು ಕೋರಿರುತ್ತಾರೆ. ಸದರಿಯವರ ವಿರುದ್ಧ ಯಾವುದೇ ವಿಚಾರಣೆ ಬಾಕಿ ಇರುವುದಿಲ್ಲವೆಂದು ಪ್ರಸ್ತಾವನೆಯಲ್ಲಿ ತಿಳಿಸಿರುತ್ತಾರೆ. ಅದರಂತೆ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 311 ಹೆಚ್‌ಎಸ್‌ಹೆಚ್ 2008, ಬೆಂಗಳೂರು, ದಿನಾಂಕ:21ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನಲೆಯಲ್ಲಿ ಡಾ: ಎಂ. ಮೋಹನ ರೆಡ್ಡಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಎಸ್.ಎನ್.ಆರ್. ಆಸ್ಪತ್ರೆ ಕೋಲಾರ ಇವರು ತಮ್ಮ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ:1.9.2006 ರಿಂದ ಜಾರಿಗೆ ಬರುವಂತೆ ಸರ್ಕಾರವು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 973

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಜಿಎಡಿ 7 ಡಿಎಸ್‌ಡಬ್ಲ್ಯೂ 69 ದಿ:19.10.1972

2. ಅಧಿಸೂಚನೆ ಸಂಖ್ಯೆ:ಸಿಆಸುಇ 667 ಎಲ್‌ಎಂಎಕ್ಸ್ 98 ದಿ:22.10.99

3. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 174 ಈಸಪ 2005, ದಿ:17.1.2006

4. ದಿ:30.4.2008ರ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರ ಪತ್ರ ಸಂಖ್ಯೆ:ಜಿಇಎ 7012/2007–08.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2) ರಂತೆ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ರಚಿಸುವ ಬಗ್ಗೆ ಆದೇಶಿಸಲಾಗಿತ್ತು. ಅದರಂತೆ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ರಚಿಸಿ ಕಾಲಕಾಲಕ್ಕೆ ಅದನ್ನು ಪುನರ್ ರಚಿಸಲಾಗುತ್ತಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ 17.1.2006ರ ಸರ್ಕಾರದ ಆದೇಶದಲ್ಲಿ ರಚಿಸಲಾಗಿರುವ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯ ಎರಡು ವರ್ಷಗಳ ಅವಧಿಯು ದಿ:16.1.2008ಕ್ಕೆ ಮುಕ್ತಾಯಗೊಂಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರು ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಪುನರ್ ರಚಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ರಾಜ್ಯ ಮಟ್ಟದಲ್ಲಿ ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 11 ಈಸಪ 2008, ಬೆಂಗಳೂರು ದಿನಾಂಕ:18ನೇ ಜೂನ್ 2008**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡ ಸರ್ಕಾರದ ವಿವಿಧ ಇಲಾಖೆಗಳ ಕಾರ್ಯದರ್ಶಿಗಳೊಂದಿಗೆ, ನೌಕರರ ಸಂಘದ ಪ್ರತಿನಿಧಿಗಳನ್ನೊಳಗೊಂಡ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಸರ್ಕಾರವು ಪುನರ್ ರಚಿಸಿದೆ.

**ಸರ್ಕಾರದ ಪ್ರತಿನಿಧಿಗಳು**

1 ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ –ಅಧ್ಯಕ್ಷರು
2 ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಸಿಆಸುಇ (ಆಡಳಿತ –ಸದಸ್ಯರು
3 ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಸಿಆಸುಇ (ಆಡಳಿತ ಸುಧಾರಣೆ) –ಸದಸ್ಯರು
4 ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ – ಸದಸ್ಯರು
5 ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ – ಸದಸ್ಯರು
6 ಸರ್ಕಾರದ ಕಾರ್ಯದರ್ಶಿ, ಪ್ರಾಥಮಿಕ ಶಿಕ್ಷಣ ಇಲಾಖೆ – ಸದಸ್ಯರು
7 ಸರ್ಕಾರದ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ – ಸದಸ್ಯರು

**ನೌಕರರ ಸಂಘದ ಪ್ರತಿನಿಧಿಗಳು**

| ಕ್ರ.ಸಂ | ಹೆಸರು ಮತ್ತು ಕಛೇರಿ | ಇಲಾಖೆ | ಸಮಿತಿ |
|---|---|---|---|
| 1 | ಶ್ರೀ ಎಲ್. ಭೈರಪ್ಪ<br>ಅಧ್ಯಕ್ಷರು<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು | ಕರ್ನಾಟಕ ಸರ್ಕಾರದ ಸಚಿವಾಲಯ, ಸಮಾಜ ಕಲ್ಯಾಣ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು | ಸದಸ್ಯರು |
| 2 | ಶ್ರೀ ರಂಗೇಗೌಡ,<br>ಪ್ರಧಾನ ಕಾರ್ಯದರ್ಶಿ<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಆನಂದರಾವ್ ವೃತ್ತ ಬೆಂಗಳೂರು | ಸದಸ್ಯರು |
| 3 | ಶ್ರೀ ಬಿ.ಎಸ್. ಪ್ರಭಾಕರ್ ಪ್ರಸಾದ್<br>ಉಪಾಧ್ಯಕ್ಷರು<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು | ಸಿಟಿ ಸಿವಿಲ್ ಕೋರ್ಟ್<br>ಕೋಟ್ ಕಾಂಪ್ಲೆಕ್ಸ್,<br>ಪೋಸ್ಟ್ ಆಫೀಸ್ ರಸ್ತೆ, ಬೆಂಗಳೂರು | ಸದಸ್ಯರು |
| 4 | ಶ್ರೀ ಚೌಡಯ್ಯ<br>ಖಜಾಂಚಿ<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ ಬೆಂಗಳೂರು | ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ<br>ರೇಸ್‌ಕೋರ್ಸ್ ರಸ್ತೆ ಖನಿಜ ಭವನ, ಬೆಂಗಳೂರು | ಸದಸ್ಯರು |
| 5 | ಅಧ್ಯಕ್ಷರು<br>ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ, ಗಾಂಧಿನಗರ, ಬೆಂಗಳೂರು | ಶಿಕ್ಷಣ ಇಲಾಖೆ | ಸದಸ್ಯರು |
| 6 | ಅಧ್ಯಕ್ಷರು<br>ಕರ್ನಾಟಕ ರಾಜ್ಯ ಸರ್ಕಾರಿ ಗ್ರೂಪ್–ಡಿ ನೌಕರರ ಸಂಘ, ಬೆಂಗಳೂರು | ಲೋಕೋಪಯೋಗಿ ಇಲಾಖೆ | ಸದಸ್ಯರು |

| 1 | 2 | 3 | 4 |
|---|---|---|---|
| 7 | ಅಧ್ಯಕ್ಷರು<br>ಕರ್ನಾಟಕ ರಾಜ್ಯ ಸರ್ಕಾರಿ ವಾಹನ ಚಾಲಕರ ಕೇಂದ್ರ ಸಂಘ,<br>ಕೆ.ಕೆ. ಗೆಸ್ಟ್‌ಹೌಸ್ ಆವರಣ ಹೈಗ್ರೌಂಡ್ಸ್,<br>ಬೆಂಗಳೂರು | ಕಂದಾಯ ಇಲಾಖೆ | ಸದಸ್ಯರು |
| 8 | ಅಧ್ಯಕ್ಷರು<br>ಕರ್ನಾಟಕ ಸರ್ಕಾರ ಸಚಿವಾಲಯ ನೌಕರರ ಸಂಘ ಬಹುಮಹಡಿ ಕಟ್ಟಡ<br>ಬೆಂಗಳೂರು | ಕರ್ನಾಟಕ ಸರ್ಕಾರ ಸಚಿವಾಲಯ,<br>ಶಿಕ್ಷಣ ಇಲಾಖೆ | ಸದಸ್ಯರು |
| 9 | ಶ್ರೀ ಪುಟ್ಟೇಗೌಡ<br>ಉಪಾಧ್ಯಕ್ಷರು<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು | ಕಂದಾಯ ಇಲಾಖೆ | ಸದಸ್ಯರು |
| 10 | ಶ್ರೀ ರಘುರಾಮ ದೇವಾಡಿಗ<br>ಅಧ್ಯಕ್ಷರು<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಶಿವಮೊಗ್ಗ | ಅರಣ್ಯ ಇಲಾಖೆ | ಸದಸ್ಯರು |
| 11 | ಶ್ರೀ ಕೆ. ಚಂದ್ರಶೇಖರ್<br>ಅಧ್ಯಕ್ಷರು<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬಳ್ಳಾರಿ | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 12 | ಶ್ರೀಮತಿ ಮೇರಿ ಮ್ಯಾಗ್ಡಲಿನ್<br>ಅಧ್ಯಕ್ಷರು<br>ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |

2. ಜಂಟಿ ಸಮಾಲೋಚನಾ ಸಮಿತಿಯ ಅಧ್ಯಕ್ಷರು ಸಮಿತಿಯ ಮೊದಲನೆಯ ಸಭೆಯಲ್ಲಿ ಸದಸ್ಯರೊಡನೆ ಸಮಾಲೋಚಿಸಿ ಸದಸ್ಯರಲೊಬ್ಬರನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಿಸುವರು.

3. ಈ ಪುನರ್ ರಚಿಸಲಾದ ಜಂಟಿ ಸಮಾಲೋಚನಾ ಸಮಿತಿಯ ದಿ:19.10.1972 ರಲ್ಲಿನ ಸರ್ಕಾರದ ಆದೇಶದ ಸಂಖ್ಯೆ:ಜಿಎಡಿ 7 ಡಿಎಸ್‌ಡಬ್ಲ್ಯೂ 69ರ ನಿಯಮ 7(ಬಿ)ರ ಪ್ರಕಾರ ಈ ಆದೇಶ ಹೊರಡಿಸಿದ ದಿನಾಂಕದಿಂದ ಎರಡು (2) ವರ್ಷಗಳ ಅವಧಿಯವರೆಗೆ ಇರುತ್ತದೆ.

4. ಸಮಿತಿಯ ವ್ಯವಹಾರಗಳನ್ನು ದಿ:19.10.1972ರ ಸರ್ಕಾರದ ಆದೇಶದ ಸಂಖ್ಯೆ ಜಿಎಡಿ 7 ಡಿಎಸ್‌ಡಬ್ಲ್ಯೂ 69 ಮತ್ತು ತದನಂತರದ ತಿದ್ದುಪಡಿಗಳಿಗನುಗುಣವಾಗಿ ನಡೆಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 974

**ಎಸ್.ಆರ್. ಹಿರೇಮಠ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಕಾರ್ಯಾಧ್ಯಯನ–2)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ತಿದ್ದೋಲೆ**

**ಸಂಖ್ಯೆ: ಕಸಂವಾಪ್ರ 146 ಕೆಎಂಯು 2007, ಬೆಂಗಳೂರು, ದಿನಾಂಕ:13ನೇ ಜೂನ್ 2008**

ಸರ್ಕಾರಿ ಆದೇಶ ಸಂಖ್ಯೆ:ಕಸಂವಾಪ್ರ 146 ಕೆಎಂಯು 2007 ದಿನಾಂಕ:6–2–2008 ರಲ್ಲಿನ "ಗೆ" ವಿಳಾಸದ ಕ್ರಮ ಸಂಖ್ಯೆ 4 ರ ನಂತರ ಈ ಮುಂದಿನ ವಿಳಾಸವನ್ನು ದಿನಾಂಕ:6–2–2008ರಿಂದಲೇ ಜಾರಿಗೆ ಬರುವಂತೆ ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

"4(ಎ) ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ವೆಂಕಟಪ್ಪ ಚಿತ್ರಶಾಲೆ, ಬೆಂಗಳೂರು"

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 975

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ಒಳಾಡಳಿತ ಸಚಿವಾಲಯ**

**ವಿಷಯ:** ಬೀರೂರು ಪೊಲೀಸ್ ಠಾಣೆಯ ಮೊಕದ್ದಮೆಯ ಸಂಖ್ಯೆ: 66/04ರ ತನಿಖೆಯಲ್ಲಿ ಲೋಪವೆಸಗಿದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ:** 1. ಡಿ.ಜಿ. ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಸಿಬಿ (5) 10/2006–07 ದಿನಾಂಕ:19.10.2006
2. ಸರ್ಕಾರದ ಆದೇಶ ಸಂಖ್ಯೆ:ಒಇ 8 ಪೊಸಿಪ 2007, ದಿನಾಂಕ:20.2.2007
3. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಸಿಬಿ 5/10/06–07 ದಿನಾಂಕ:2.4.2008

**ಪ್ರಸ್ತಾವನೆ:**

ಶ್ರೀ ಪವನ್‌ಕುಮಾರ್, ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಬೀರೂರು ಪೊಲೀಸ್ ಠಾಣೆ ಶ್ರೀ ಕೆ. ಪುರುಷೋತ್ತಮ, ಸಿ.ಪಿ.ಐ. ಬೀರೂರು ವೃತ್ತ ಶ್ರೀ ಅಶೋಕ್ ಎಲ್. ಸದಲಗಿ, ಡಿವೈ.ಎಸ್.ಪಿ ತರೀಕೆರೆ ಉಪ ವಿಭಾಗ ಹಾಗೂ ಶ್ರೀ ಮಹಾಂತೇಶ್, ಡಿವೈ.ಎಸ್.ಪಿ. ತರೀಕೆರೆ ಉಪ ವಿಭಾಗ ರವರುಗಳು ಬೀರೂರು ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ:166/04ರ ತನಿಖೆಯಲ್ಲಿ ಲೋಪವೆಸಗಿರುತ್ತಾರೆಂದು ಈ ಕೆಳಕಂಡಂತೆ ಆರೋಪ ಹೊರಿಸಲಾಗಿದೆ.

**ಆರೋಪ:**

1) ಬೀರೂರು ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ದಿನಾಂಕ:15.12.2004 ರಂದು ಶ್ರೀ ಕುಭೇಂದ್ರಯ್ಯ, ಚಿಕ್ಕಮಗಳೂರು ಜಿಲ್ಲೆ ರವರು ಬೀರೂರು ಪೊಲೀಸ್ ಠಾಣೆಗೆ ದೂರನ್ನು ಸಲ್ಲಿಸಿದ್ದು, ಸದರಿ ದೂರಿನಲ್ಲಿ ಅವರ ಮಗಳಾದ ಸೌಮ್ಯಳನ್ನು ಬೀರೂರು ವಾಸಿ ಮುದ್ದವೀರಯ್ಯನವರ ಮಗ ಗುರುಮೂರ್ತಿಗೆ ದಿನಾಂಕ:28.3.2004 ರಂದು ಮದುವೆ ಮಾಡಿಕೊಟ್ಟದ್ದು ನಂತರ ಮೃತಳನ್ನು ತವರು ಮನೆಗೆ ಹೋಗಬಾರದು ನಿಮ್ಮ ತಂದೆ ತಾಯಿ ಜೊತೆ ಮಾತನಾಡಬಾರದು ಎಂದು ಆರೋಪಿಗಳಾದ ಗಂಡ, ಅತ್ತೆ, ಮಾವರವರು ಆಕೆಗೆ ಮಾನಸಿಕವಾಗಿ ಹಿಂಸೆ ನೀಡುತ್ತಿದ್ದಾರೆಂದು ಮತ್ತು ಆರೋಪಿಗಳಾದ ಗಂಡ, ಅತ್ತೆ, ಮಾವರವರು ಆಕೆಗೆ ಮಾನಸಿಕವಾಗಿ ಹಿಂಸೆ ನೀಡುತ್ತಿದ್ದಾರೆಂದು ಮತ್ತು ಆರೋಪಿಗಳು ನೀನು ಏನಾದರೂ ಮಾಡಿಕೊಂಡು ಸಾಯೀ, ಸಾಯುವಾಗ ನಮ್ಮ ಹೆಸರನ್ನು ಬರೆದಿಟ್ಟು ಸಾಯಬೇಡ ಎಂದು ಪ್ರತಿದಿನ ಅವಾಚ್ಯ ಶಬ್ದಗಳಿಂದ ಬೈದು ಹಿಂಸೆ ನೀಡಿರುತ್ತಾರೆ ಎಂದು ಮಗಳು ತವರಿಗೆ ತಿಳಿಸಿರುತ್ತಾಳೆ. ಇದೂ ಅಲ್ಲದೆ ಅಳಿಯನಾದ ಗುರುಮೂರ್ತಿ ತಮ್ಮ ಮನೆಗೆ ಬಂದು ಮಾವನಿಂದ ಹಣ ತಂದು ಬೇರೆ ಜೆರಾಕ್ಸ್ ಮಿಷಿನ್ ಅಂಗಡಿ ಇಟ್ಟುಕೊಳ್ಳಲು ತಂದೆಯವರು ಹೇಳಿರುತ್ತಾರೆ ಎಂದು ತೀಳಿಸಿ ರೂ. 25,000/– ಕೊಡಿ ಅಂತ ಕೇಳಿದ್ದರಿಂದ ಆತನಿಗೆ ರೂ 25,000/–ಗಳನ್ನು ಕೊಟ್ಟಿರುತ್ತಾರೆ. ಆದಾಗ್ಯೂ ಕೂಡ ಆರೋಪಿಗಳು ನೀಡುತ್ತಿದ್ದ ಕಿರುಕುಳ ತಾಳಲಾರದೆ ದಿನಾಂಕ:15.12.2004 ರಂದು ಸೌಮ್ಯಳು ತನ್ನ ಗಂಡನ ಮನೆಯಲ್ಲಿ ನೇಣು ಹಾಕಿಕೊಂಡು ಮೃತಪಟ್ಟಿರುತ್ತಾಳೆ ಎಂದು ಆರೋಪಿಸಿದ್ದರ ಮೇರೆಗೆ ಠಾಣೆಯ ಮೊ.ನಂ. 166/04 ಕಲಂ 498 (ಎ) 306 ಐಪಿಸಿ ರೀತ್ಯಾ ಪ್ರಕರಣವನ್ನು ದಾಖಲು ಮಾಡಿಕೊಳ್ಳಲಾಗಿದೆ.

2) ಈ ಅಧಿಕಾರಿಗಳು ಬೀರೂರು ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ:166/04ರ ಕಲಂ 498(ಎ), 304(ಬಿ), 306 r/w 34 ಐಪಿಸಿ ಮತ್ತು 3,4,6 ಡಿಪಿ ಕಾಯ್ದೆ ಪ್ರಕರಣದಲ್ಲಿ ಸಮರ್ಪಕ ತನಿಖೆ ಮಾಡದೆ ಇರುವುದು ಸಿಓಡಿ ರವರ

ತನಿಖೆಯಿಂದ ಸಾಬೀತಾಗಿರುತ್ತದೆ. ಸೌಮ್ಯ ಎಂಬಾಕೆ ತನ್ನ ಗಂಡನ ಮನೆಯಲ್ಲಿ ನೇಣು ಹಾಕಿಕೊಂಡು ಮೃತಪಟ್ಟಿರುತ್ತಾಳೆ ಎಂದು ಆರೋಪಿಸಿದ್ದರ ಮೇರೆಗೆ ಬೀರೂರು ಪೊಲೀಸ್ ಠಾಣೆಯಲ್ಲಿ ಕೇವಲ 498(ಎ), 306 ಐಪಿಸಿ ರೀತ್ಯಾ ಮಾತ್ರ ಕೇಸುಗಳನ್ನು ದಾಖಲು ಮಾಡಿದ್ದು, ವರದಕ್ಷಿಣೆ ಕಿರುಕುಳ ಸಾವಿನ ಬಗ್ಗೆ ಮಾಡಲಾದ ಆಪಾದನೆಗಳ ಮೇರೆಗೆ ಕಲಂ 304(ಬಿ) ಡಿ/ತಿ 34 ಐಪಿಸಿ ಮತ್ತು ಕಲಂ 3,4,6 ಡಿಪಿ ಕಾಯ್ದೆಗಳನ್ನು ಸೇರಿಸುವ ಅವಶ್ಯಕತೆ ಇದ್ದರೂ ಸಹ ಸದರಿ ಕಲಂನಲ್ಲಿ ಸೇರಿಸಿರುವುದಿಲ್ಲ. ಮತ್ತು ಇವರ ವರದಕ್ಷಣೆಯ ಬಗ್ಗೆ ಸಂಬಂಧಪಟ್ಟವರ ವಿವರವಾದ ಹೇಳಿಕೆಗಳನ್ನು ಪಡೆದಿರುವುದಿಲ್ಲವೆಂಬುದು ಪ್ರಮುಖ ದೋಷಾರೋಪಣೆ.

ಮೇಲೆ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಈ ಕೆಳಕಂಡ ಪೊಲೀಸ್ ಅಧಿಕಾರಿಗಳ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965/89ರ ನಿಯಮ 6 ಉಪ ನಿಯಮ (2) ಮತ್ತು 8 ರನ್ವಯ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಲಾಗಿದೆ.

3) ಶ್ರೀ ಮಹಾಂತೇಶ್, ಹಿಂದಿನ ಡಿವೈ.ಎಸ್.ಪಿ ತರೀಕೆರೆ ಉಪ ವಿಭಾಗ ಹಾಲಿ ಎಸ್.ಪಿ

4) ಶ್ರಿ ಅಶೋಕ್ ಎಲ್. ಸದಲಗಿ, ಡಿವೈ.ಎಸ್.ಪಿ ಡಿ.ಸಿ.ಆರ್.ಬಿ. ಧಾರವಾಡ ಜಿಲ್ಲೆ.

5) ಶ್ರೀ ಕೆ. ಪುರುಷೋತ್ತಮ, ಪಿ.ಐ. ಡಿ.ಸಿ.ಐ.ಬಿ. ಚಿಕ್ಕಮಗಳೂರು ಜಿಲ್ಲೆ

6) ಶ್ರೀ ಪವನ್‌ಕುಮಾರ್, ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಬರ್ಕೆ ಪೊಲೀಸ್ ಠಾಣೆ, ಮಂಗಳೂರು ಜಿಲ್ಲೆ.

ಈ ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀ ವಿಪುಲ್‌ಕುಮಾರ್, ಐ.ಪಿ.ಎಸ್ ಎಸ್.ಪಿ. ಚಿಕ್ಕಮಗಳೂರು ಇವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯೆಂದು ನೇಮಿಸಲಾಗಿದೆ.

ಡಿಜಿ ಮತ್ತು ಐಜಿಪಿ ರವರು ದಿನಾಂಕ:20–4–2008ರಂದು ತಮ್ಮ ಪ್ರಸ್ತಾವನೆಯಲ್ಲಿ ಇಲಾಖಾ ವಿಚಾರಣಾಧಿಕಾರಿಗಳು ಅಂತಿಮ ವರದಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.ವಿಚಾರಣಾಧಿಕಾರಿಗಳು ಅಭಿಯೋಗದ ಪರವಾಗಿ 10 ಸಾಕ್ಷಿಗಳನ್ನು ವಿಚಾರಣೆ ಮಾಡಿ ಹೇಳಿಕೆಗಳನ್ನು ಪಡೆದು, 24 ದಾಖಲಾತಿಗಳನ್ನು ಹಾಗೂ ರಕ್ಷಣಾ ಪರವಾಗಿ 6 ದಾಖಲಾತಿಗಳನ್ನು ಪರಿಶೀಲಿಸಿ ಆರೋಪಿತ ಪೊಲೀಸ್ ಅಧಿಕಾರಿಗಳ ವಿರುದ್ಧ ಹೊರಿಸಲಾದ ದೋಷಾರೋಪಣೆಗಳು ಸಾಬೀತಾಗಿರುವುದಿಲ್ಲವೆಂದು ವರದಿಯನ್ನು ನೀಡಿರುತ್ತಾರೆ.

1. ಆ.ಪೊ.ಅ.–1 ಶ್ರೀ ಎಂ.ಎಸ್. ಪವನ್ ಕುಮಾರ್, ಪಿ.ಎಸ್.ಐ. ಈ ಹಿಂದೆ ಬೀರೂರು ಪೊಲೀಸ್ ಠಾಣೆ ಪ್ರಸ್ತುತ ಸುಳ್ಯ ಪೊಲೀಸ್ ಠಾಣೆ, ದಕ್ಷಿಣ ಕನ್ನಡ ಜಿಲ್ಲೆ–ಇವರ ಮೇಲೆ 3 ಆರೋಪಗಳನ್ನು ಹೊರಿಸಲಾಗಿದ್ದು. ಇವುಗಳು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ತಿಳಿಸಿರುತ್ತಾರೆ.

2. ಆ.ಪೊ.ಅ–2 ಶ್ರೀ ಕೆ.ಸಿ ಪುರುಷೋತ್ತಮ, ಪಿ.ಐ. ಡಿಸಿಐಬಿ, ಚಿಕ್ಕಮಗಳೂರು, ಈ ಹಿಂದೆ ಸಿಪಿಐ, ಬೀರೂರು ವೃತ್ತ–ಇವರ ವಿರುದ್ಧ 2 ಆರೋಪಗಳನ್ನು ಹೊರಿಸಲಾಗಿದ್ದು, ವಿಚಾರಣಾಧಿಕಾರಿಗಳು ಇವು ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿಸಿರುತ್ತಾರೆ.

3. ಆ.ಪೊ.ಅ–3 ಶ್ರೀ ಅಶೋಕ್ ಎಸ್. ಸದಲಗಿ, ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಗದಗ, ಈ ಹಿಂದೆ ಪೊಲೀಸ್ ಉಪಾಧೀಕ್ಷಕರು, ಚಿಕ್ಕಮಗಳೂರು ಉಪ ವಿಭಾಗ ಹಾಗೂ ಪ್ರಭಾರ ತರೀಕೆರೆ ಉಪ ವಿಭಾಗ, ಚಿಕ್ಕಮಗಳೂರು ಜಿಲ್ಲೆ –ಇವರು ತರೀಕೆರೆ ಪೊಲೀಸ್ ಠಾಣೆಯ ಪ್ರಭಾರದಲ್ಲಿದ್ದಾಗ ಇವರ ವ್ಯಾಪ್ತಿಯ ಬೀರೂರು ಪೊಲೀಸ್ ಠಾಣೆಯಲ್ಲಿ ಪ್ರಕರಣವನ್ನು ದಾಖಲಿಸಿದ್ದು, ಇವರ ವಿರುದ್ಧ 6 ಆರೋಪಗಳನ್ನು ಹೊರಿಸಿದ್ದು, ಇಲಾಖಾ ವಿಚಾರಣಾಧಿಕಾರಿಗಳು ಇವು ಸಾಭಿತಾಗಿರುವುದಿಲ್ಲವೆಂದು ಅಭಿಪ್ರಾಯ ನೀಡಿರುತ್ತಾರೆ.

4. ಆ.ಪೊ.ಅ–4 ಶ್ರೀ ಬಿ. ಮಹಾಂತೇಶ್, ಪೊಲೀಸ್ ಅಧೀಕ್ಷಕರು ರಾಜ್ಯ ಗುಪ್ತ ವಾರ್ತೆ, ಮಂಗಳೂರು ಈ ಹಿಂದೆ ಪೊಲೀಸ್ ಉಪಾಧೀಕ್ಷಕರು, ತರೀಕೆರೆ ಉಪ ವಿಭಾಗಮ ಚಿಕ್ಕಮಗಳೂರು ಜಿಲ್ಲೆ ಇವರ ಪ್ರಕರಣವನ್ನು ಕಲಂ 304(ಬಿ) ಸಹ ಕಲಂ 34 ಐಪಿಸಿ ಜೊತೆಗೆ 3,4,6 ಡಿಪಿ ಕಾಯ್ದೆ ಅನ್ವಯ ಕಾನೂನು ಕ್ರಮ ಕೈಗೊಳ್ಳದೇ 18 ದಿವಸಗಳ ಕಾಲ ವಿಳಂಬವಾಗಿ 304(ಬಿ) ಐಪಿಸಿ ರೀತ್ಯಾ ಮತ್ತೊಂದು ವರ್ತಮಾನ ವರದಿಯನ್ನು ನ್ಯಾಯಾಲಯಕ್ಕೆ ಕಳುಹಿಸಿ ಪಿ.ಎಸ್.ಐ. ರವರಿಗೆ ಜ್ಞಾಪನ ಮುಖಾಂತರ ಸೂಚನೆ ಕೊಟ್ಟಿರುವುದು ಈ ರೀತಿ ಪ್ರಕರಣವನ್ನು ಗಂಭೀರವಾಗಿ ಪರಿಗಣಿಸದೇ ಅನಾವಶ್ಯಕ ವಿಳಂಬ ನೀತಿಯನ್ನು ಅನುಸರಿಸಿ ಕರ್ತವ್ಯಲೋಪ ಮಾಡಿರುವುದಕ್ಕೆ ಆರೋಪವನ್ನು ಹೊರಿಸಿದ್ದು, ಈ ಆರೋಪವು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 8 ಪೊಸಿಪ 2007, ಬೆಂಗಳೂರು, ದಿನಾಂಕ:24ನೇ ಜೂನ್ 2008**

ಬೀರೂರು ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ:166/04ರ ತನಿಖೆಯಲ್ಲಿ ಲೋಪವೆಸಗಿದ ಬಗ್ಗೆ ಈ ಕೆಳಕಂಡ ಅಧಿಕಾರಿಗಳನ್ನು ಅವರ ಮೇಲೆ ಹೊರಿಸಲಾದ ದೋಷಾರೋಪಣೆಗಳಿಂದ ದೋಷಮುಕ್ತಗೊಳಿಸಿ ಆದೇಶಿಸಲಾಗಿದೆ.

1. ಶ್ರೀ ಮಹಾಂತೇಶ್, ಹಿಂದಿನ ಡಿವೈ.ಎಸ್.ಪಿ ತರೀಕೆರೆ ಉಪ ವಿಭಾಗ ಹಾಲಿ ಎಸ್.ಪಿ.
2. ಶ್ರಿ ಅಶೋಕ್ ಎಲ್. ಸದಲಗಿ, ಡಿವೈ.ಎಸ್.ಪಿ ಡಿ.ಸಿ.ಆರ್.ಬಿ. ಧಾರವಾಡ ಜಿಲ್ಲೆ.
3. ಶ್ರೀ ಕೆ. ಪುರುಷೋತ್ತಮ, ಪಿ.ಐ. ಡಿ.ಸಿ.ಐ.ಬಿ ಚಿಕ್ಕಮಗಳೂರು ಜಿಲ್ಲೆ
4. ಶ್ರೀ ಪವನ್‌ಕುಮಾರ್, ಪೊಲೀಸ್ ಸಬ್–ಇನ್ಸ್ ಪೆಕ್ಟರ್, ಬರ್ಕೆ ಪೊಲೀಸ್ ಠಾಣೆ, ಮಂಗಳೂರು ಜಿಲ್ಲೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 969

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಚಂದ್ರಶೇಖರ್ ಲ. ಘಸ್ತಿ ಸಿಪಿಸಿ–985, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ ಬೆಳಗಾವಿ ಇವರ ಆದೇಶ ಸಂಖ್ಯೆ:ಡಿಇ:45:ಉವ:2005 ದಿನಾಂಕ:14–9–2006

2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:21–4–2007

3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ:8:10:2007–08 ದಿನಾಂಕ:11–01–2008

**ಪ್ರಸ್ತಾವನೆ:**

ಶ್ರೀ ಚಂದ್ರಶೇಖರ್ ಲ.ಘಸ್ತಿ ಸಿಪಿಸಿ–985, ಮೂಡಲಗಿ ಪೊಲೀಸ್ ಠಾಣೆ ಗೋಕಾಕ್ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. ಆಪಾದಿತ ಪೊಲೀಸ್ ಅಧಿಕಾರಿ ಸಿಪಿಸಿ–985, ಸಿ.ಎಲ್. ಘಸ್ತಿ, ಮೂಡಲಗಿ ಪೊಲೀಸ್ ಠಾಣೆ ರವರಾದ ನೀವು ದಿ:1–1–2005 ರಿಂದ ದಿ:22–9–2005 ರವರೆಗೆ ಹಾಗೂ ಆಪಾದಿತ ಪೊಲೀಸ್ ಅಧಿಕಾರಿಯಾದ ಸಿಪಿಸಿ–2114 ಎಂ.ಡಿ ಪಟ್ಟಣದ ಅಂಕಲಗಿ ಪೊಲೀಸ್ ಠಾಣೆ ರವರಾದ ನೀವು ದಿ:31.8.2005 ರಿಂದ ದಿ:22–9–2005 ರವರೆಗೆ ಖಾನಾಪೂರ ಸಿಪಿಐ ರವರ ಸ್ಕ್ವಾಡದಲ್ಲಿ ಕಾರ್ಯ ನಿರ್ವಹಿಸುವಾಗ ಹೆಚ್ಚಿನ ಮಹತ್ವದ ಯಾವುದೇ ಕಾರ್ಯವನ್ನು ಮಾಡುವಲ್ಲಿ ಯಾವುದೇ ಕಾನೂನುಬಾಹಿರ ಚಟುವಟಿಕೆಗಳ ಬಗ್ಗೆ ಮಾಹಿತಿ ಸಂಗ್ರಹಿಸುವಲ್ಲಿ ಯಾವುದೇ ಪ್ರಕರಣವನ್ನು ಪತ್ತೆ ಮಾಡುವಲ್ಲಿ ವಿಫಲರಾಗಿರುವಿರಿ.

2. ದಿ.:30–7–2005ರ ತರುಣ ಭಾರತ ದಿನಪತ್ರಿಕೆಯಲ್ಲಿ ಸುದ್ದಿಯ ಮೇರೆಗೆ ಸಿಪಿಐ ರವರ ಸ್ಕ್ವಾಡದಲ್ಲಿ ಕೆಲಸ ಮಾಡುವ ನೆವದಲ್ಲಿ ಸಿ.ಪಿ.ಐ ರವರ ಪರವಾಗಿ ಜನರಿಂದ ಹಣ ವಸೂಲಾತಿ ಮಾಡುತ್ತ ಇಲಾಖೆಯ ಗೌರವಕ್ಕೆ ಧಕ್ಕೆ ಬರುವ ರಿತಿಯಲ್ಲಿ ವರ್ತಿಸಿದ್ದಲ್ಲದೇ ಆ.ಪೊ.ಅ–1 & 2 ಇವರಲ್ಲಿ ತಪ್ಪು ಕಲ್ಪನೆ, ಭಿನ್ನಾಭಿಪ್ರಾಯ ಉಂಟು ಮಾಡಿ ಲೊಂಡಾದಲ್ಲಿಯ ಘಂಟಾಗಲ್ಲಿಯಲ್ಲಿ (ಗಾಂಧಿನಗರದಲ್ಲಿಯ) ಜೂಜಾಟದ ಬಗ್ಗೆ ಸೂಕ್ತ ಹಾಗೂ ಸರಿಯಾದ ಮಾಹಿತಿ ಸಂಗ್ರಹಿಸಿದೇ ಅಲ್ಲಿ ಹೆಚ್ಚಾಗಿ ಗುನ್ನೆಗಾರರು ಸಮಾಜಘಾತುಕ ಚಟುವಟಿಕೆಯುಳ್ಳವರು ಇರುತ್ತಾರೆ ಎಂದು ಗೊತ್ತಿದ್ದರೂ ಸಹ ಸಿಪಿಐ ರವರಿಗೆ ಅದನ್ನು ತಿಳಿಸದೇ ತಪ್ಪು ಮಾಹಿತಿ ನೀಡಿ ಸರಿಯಾದ ಪೂರ್ಣ ತಯಾರಿ ಇಲ್ಲದೆ ಈ ಜೂಜಾಟದ ದಾಳಿಗೆ ಕಾರಣೀಭೂತರಾಗಿ ದಾಳಿಯ ಸಮಯದಲ್ಲಿ ನೀವು ಜೂಜಾಡುತ್ತಿದ್ದವರ ಮೇಲೆ ಕಾನೂನು ಕ್ರಮ ಕೈಗೊಳ್ಳದೇ ಅವರಿಗೆ ಸಿಕ್ಕಾಪಟ್ಟೆ ಹೊಡಿಬಡಿ ಮಾಡಿ ಸಹನೆಯಿಲ್ಲದೆ ಅಸಭ್ಯ ರೀತಿಯಿಂದ ವರ್ತಿಸಿದ್ದರಿಂದ ಜೂಜಾಡುವವರು ಪ್ರಚೋದನೆಗೊಂಡು ತಿರುಗಿ ನಿಮ್ಮ ಮೇಲೆ ಬಿದ್ದುಹೊಡಿಬಡಿ ಮಾಡಿದ್ದರಿಂದ ಆಪೊಅ–4 ರವರ ತಲೆಗೆ ಪೆಟ್ಟು ಬಿದ್ದು ಗಾಯವಾಗಿದ್ದು ಅಲ್ಲದೇ ಜೀಪಿಗೂ ಸಹ ಕಲ್ಲು ಒಗೆದು ಸರ್ಕಾರಿ ವಾಹನಕ್ಕೆ ಹಾನಿ ಮಾಡಿದ್ದು ಇದಕ್ಕೆಲ್ಲ ಸೂಕ್ತ ಮಾಹಿತಿ ಸಂಗ್ರಹಿಸುವಲ್ಲಿ ವಿಫಲರಾಗಿ ತಪ್ಪು ಮಾಹಿತಿಯನ್ನು ಮೇಲಾಧಿಕಾರಿ ಗಳಿಗೆ ನೀಡಿ ಈ ಘಟನೆಗೆ ಕಾರಣೀಭೂತರಾಗಿ ನಿಮ್ಮ ಕರ್ತವ್ಯದಲ್ಲಿ ವಿಮುಖತ, ನಿರ್ಲಕ್ಷ್ಯತನ, ಅಕ್ರಮ ಸಂಭಾವನೆ, ಸ್ವೀಕರಿಸಿ ಕರ್ತವ್ಯಚ್ಯುತಿ ತೋರ್ಪಡಿಸಿರುವಿರಿ.

3. ಈ ಘಟನೆಯ ಬಗ್ಗೆ ನೀವು ನಿಮ್ಮ ಮೇಲಾಧಿಕಾರಿಗಳಾದ ಡಿ.ಎಸ್.ಪಿ., ಪಿ.ಎಸ್.ಐ., ಅಪೊಅ–2 ರವರಿಗೆ ಕೂಡಲೇ ತಿಳಿಸದೇ ಅದನ್ನು ಮುಚ್ಚಿ ಹಾಕಲು ಅಪೊಅ–1 ರವರೊಂದಿಗೆ ಬೆಳಗಿನವರೆಗೆ ಪ್ರಯತ್ನಿಸಿ ಜೂಜಾಡುವವರಿಂದ ಹಣದ ಬೇಡಿಕೆಯನ್ನಿಟ್ಟು ಅವರಿಂದ ಮುಂಗಡ ಹಣ ಪಡೆದುಕೊಳ್ಳುವಲ್ಲಿ ಸಹಕರಿಸಿ ನಿಮ್ಮ ಕರ್ತವ್ಯದಲ್ಲಿ ದುರ್ನಡತೆ, ಅಸಭ್ಯ ವರ್ತನೆ ಪ್ರದರ್ಶಿಸಿದ್ದು ಅಕ್ರಮ ಸಂಭಾವನೆ ಸ್ವೀಕರಿಸುವಲ್ಲಿ ಸಹಾಯಕ ಮಾಡಿ ಕರ್ತವ್ಯಚ್ಯುತಿ ಎಸಗಿರುವಿರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖೆ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ನಿರೀಕ್ಷಕರು, ಉತ್ತರ ವಲಯ ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ:14.9.2006ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಯ ಮೇಲೆ ಧಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಿದ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ,. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಿವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮೇಲ್ಮನವಿ ಅರ್ಜಿದಾರರು ಖಾನಾಪೂರ ಸಿಪಿಐ ರವರ ಸ್ಕ್ವಾಡದಲ್ಲಿ ಕಾರ್ಯ ನಿರ್ವಹಿಸುವಾಗ ಹೆಚ್ಚಿನ ಮಹತ್ವದ ಯಾವುದೇ ಕಾರ್ಯವನ್ನು ಮಾಡುವಲ್ಲಿ ಮತ್ತು ಕಾನೂನುಬಾಹಿರ ಚಟುವಟಿಕೆಗಳ ಬಗ್ಗೆ ಮಾಹಿತಿ ಸಂಗ್ರಹಿಸುವಲ್ಲಿ ಅಲ್ಲದೇ ಯಾವುದೇ ಪ್ರಕರಣ ಪತ್ತೆ ಮಾಡುವಲ್ಲಿ ವಿಫಲಗೊಂಡಿದ್ದು ಸ್ಪಷ್ಟವಾಗಿರುತ್ತದೆ. ಲೊಂಡಾದಲ್ಲಿಯೇ ಘಂಟಾ ಗಲ್ಲಿಯಲ್ಲಿಯ ಜೂಜಾಟದ ಬಗ್ಗೆ ಸೂಕ್ತ ಹಾಗೂ ಸರಿಯಾದ ಮಾಹಿತಿ ಸಂಗ್ರಹಿಸದೇ ಅಲ್ಲಿ ಗುನ್ನೆಗಾರರು ಮತ್ತು ಸಮಾಜಘಾತುಕ ಚಟುವಡಿಕೆಯುಳ್ಳವರು ಹೆಚ್ಚಿನ ಸಂಖ್ಯೆಯಲ್ಲಿರುತ್ತಾರೆ ಎಂದು ಗೊತ್ತಿದ್ದರೂ ಸಹ ಸಿಪಿಐ ರವರಿಗೆ ಈ ಬಗ್ಗೆ ತಿಳಿಸದೇ ತಪ್ಪ ಮಾಹಿತಿ ನೀಡಿ ಸರಿಯಾದ ಪೂರ್ಣ ತಯಾರಿ ಇಲ್ಲದೇ ಜೂಜಾಟದ ದಾಳಿಗೆ ಕಾರಣೀಭೂತರಾಗಿದ್ದು ಅಭಿಯೋಗಪರ 21 ಸಾಕ್ಷಿದಾರರಾದ ಡಿ.ಎಸ್.ಪಿ. ಬೆಳಗಾವಿ ಗ್ರಾಮೀಣರವರ ವರದಿಯ ಮೇರೆಗೆ ಸ್ಪಷ್ಟವಾಗಿರುತ್ತದೆ. ಆದ್ದರಿಂದ ಪರಿಷ್ಕರಣ ಮೇಲ್ಮನವಿ ಅರ್ಜಿದಾರರು, ತಾನು ಕರ್ತವ್ಯವನ್ನು ದಕ್ಷತೆಯಿಂದ ನಿರ್ವಹಿಸುತ್ತಿರುತ್ತೇನೆ ಮತ್ತು ಸದರಿ ಘಟನೆಯ ಬಗ್ಗೆ ಮೇಲಾಧಿಕಾರಿಗಳಿಗೆ ವಿವರಗಳನ್ನು ನೀಡಿರುತ್ತೇನೆ. ಎಂದು ಯಾವ ಸಾಕ್ಷ್ಯಾಧಾರಗಳಿಲ್ಲದೆ ಹೇಳುವುದು ತದನಂತರ ವಾದವಾಗಿದೆ. ಆದ್ದರಿಂದ ತಾನು ಘಟನೆಯ ಬಗ್ಗೆ ಮೇಲಾಧಿಕಾರಿಗಳಿಗೆ ವಿವರಗಳನ್ನು ನೀಡಿರುತ್ತೇನೆಂದು ಹೇಳುವುದು ಸತ್ಯಕ್ಕೆ ದೂರವಾಗಿದೆ. ಅಭಿಯೋಗದ ಸಾಕ್ಷಿದಾರರ ಹೇಲಿಕೆಗಳ ಆಧಾರದ ಮೇಲೆ ಪರಿಷ್ಕರಣ ಮೇಲ್ಮನವಿ ಅರ್ಜಿದಾರರ ಮೇಲಿನ ದೋಷಾರೋಪವು ಸ್ಥಿರಪಟ್ಟಿದ್ದು ಇದ್ದು ದೋಷಾರೋಪಕ್ಕೆ ತಕ್ಕಂತೆ ಶಿಕ್ಷೆಯನ್ನು ವಿಧಿಸಿದ್ದು ಇರುತ್ತದೆ. ಪರಿಷ್ಕರಣೆ ಮೇಲ್ಮವಿ ಅರ್ಜಿದಾರರ ಮೇಲಿನ ಇಲಾಖಾ ವಿಚಾರಣೆಯಲ್ಲಿನ ಇನ್ನೊಬ್ಬ ಆಪಾದಿತರಾದ ಶ್ರೀ ಎಸ್.ಎಸ್. ಪಾಟೀಲ ಪಿಎಸ್ ಐ ಡಿ.ಸಿ.ಆರ್.ಬಿ ಗದಗ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸರ್ಕಾರದ ದಿ:21.4.2007ರ ಆದೇಶದಲ್ಲಿ ತಿರಸ್ಕರಿಸಲಾಗಿದೆ. ಅದರಂತೆ ಪರಿಷ್ಕರಣ ಮೇಲ್ಮನವಿ ಅರ್ಜಿದಾರರ ಮೇಲೆ ಮಾಡಲಾದ ದೋಷಾರೋಪಕ್ಕೂ ಹಾಗೂ ಅವರು ಮಂಡಿಸಿರುವ ವಿವಾದಾಂಶಗಳಿಗೂ ಯಾವುದೇ ಸಂಬಂಧವಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 365 ಪೊಸಿಅ 2007 ಬೆಂಗಳೂರು, ದಿನಾಂಕ:28ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನನು ಚಲಾಯಿಸಿ, ಶ್ರೀ ಚಂದ್ರಶೇಖರ್ ಲ.ಘಸ್ತಿ, ಸಿಪಿಸಿ–985, ಮೂಡಲಗಿ ಪೊಲೀಸ್ ಠಾಣೆ, ಗೋಕಾಕ್ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1160

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ:** ಜವಹರ ಬಾಲಭವನ ಅಮ್ಯೂಸ್ಮೆಂಟ್ ಪಾರ್ಕಿನ ಆವರಣದಲ್ಲಿ ಟೋರಾ ಟೋರಾ ದುರಂತದ ಬಗ್ಗೆ– ಶ್ರೀಮತಿ ದಿವ್ಯಾನಾರಾಯಣಪ್ಪ ಆಡಳಿತಾಧಿಕಾರಿ, ಇವರ ಅಮಾನತ್ತಿನ ಆದೇಶವನ್ನು ರದ್ದುಪಡಿಸಿ ಸೇವೆಗೆ ಪುನರ್ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಮಮಇ 318 ಎಸ್ ಜೆಡಿ 2008 ದಿ:1–7–2008

2. ಶ್ರೀಮತಿ ಬಿಂದು, ಜಂಟಿ ನಿರ್ದೇಶಕರು (ಐಸಿಡಿಎಸ್), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹಾಗೂ ಕಾರ್ಯದರ್ಶಿಗಳು (ಪ್ರ), ಬಾಲಭವನ ಸೊಸೈಟಿ ಬೆಂಗಳೂರುರವರ ವರದಿ ದಿ:30–6–2008

3. ಶ್ರೀಮತಿ ದಿವ್ಯ ನಾರಾಯಣಪ್ಪ, ಆಡಳಿತಾಧಿಕಾರಿ, ಬಾಲಭವನ, ಬೆಂಗಳೂರು (ಹಾಲಿ ಅಮಾನತ್ತಿನಲ್ಲಿರುವವರು) ರವರ ಮನವಿ ದಿ:1–7–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿ:1–7–2008 ರ ಆದೇಶದಲ್ಲಿ ಜವಹರ ಬಾಲಭವನ ಅಮ್ಯೂಸ್‌ಮೆಂಟ್ ಪಾರ್ಕಿನ ಆವರಣದಲ್ಲಿ ಟೋರಾ ಟೋರಾ ದುರಂತದಲ್ಲಿ ಶ್ರೀಮತಿ ಆಯೇಷಾರವರು ಮೃತಪಟ್ಟಿದ್ದು, ಈ ದುರಂತಕ್ಕೆ ಬಾಲಭವನದ ಅಧಿಕಾರಿಗಳ ನಿರ್ಲಕ್ಷವೇ ಕಾರಣವೆಂದು ಮೇಲ್ನೋಟಕ್ಕೆ ಕಂಡುಬಂದಿರುವ ಹಿನ್ನಲೆಯಲ್ಲಿ, ಬಾಲಭವನದ ಆಡಳಿತಾಧಿಕಾರಿಯಾದ ಶ್ರೀಮತಿ ದಿವ್ಯಾನಾರಾಯಣಪ್ಪ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವುದನ್ನು ಬಾಕಿಯಿಟ್ಟು ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿ:30–6–2008ರ ಪೂರ್ವಭಾವಿ ತನಿಖಾ ವರದಿಯಲ್ಲಿ ಬಾಲಭವನದಲ್ಲಿ ನಡೆದ ದುರ್ಘಟನೆಯು ಒಂದು ಆಕಸ್ಮಿಕ ಅಪಘಾತವಾಗಿದ್ದು, ಇದಕ್ಕೆ ಗುತ್ತಿಗೆದಾರರೇ ನೇರವಾಗಿ ಹೊಣೆಗಾರರಾಗಿರುತ್ತಾರೆಂದು, ಜಂಟಿ ನಿರ್ದೇಶಕರು (ಐಸಿಡಿಎಸ್) ಹಾಗೂ ಪ್ರಭಾರ ಕಾರ್ಯದರ್ಶಿ, ಬಾಲಭವನ ಸೊಸೈಟಿ ಇವರು ವರದಿ ಮಾಡಿರುತ್ತಾರೆ ದುರ್ಘಟನೆ ನಡೆದ ದಿನದಂದು ಬಾಲಭವನಕ್ಕೆ ವಾರದ ರಜೆಯಿದ್ದು, ದುರ್ಘಟನೆಯ ವಿಷಯ ತಿಳಿದ ಕೂಡಲೇ ಶ್ರೀಮತಿ ದಿವ್ಯಾನಾರಾಯಣಪ್ಪರವರು ಬಾಲಭವನದ ಆಡಳಿತಾಧಿಕಾರಿಯಾದ್ದರಿಂದ ಜವಾಬ್ದಾರಿಯಿಂದ ಸ್ಥಳಕ್ಕೆ ಆಗಮಿಸಿ ಪೊಲೀಸರಿಗೆ ವಿಷಯ ತಿಳಿಸಿರುತ್ತಾರೆಂದು ಹಾಗೂ ಸದರಿಯವರು ಬಾಲಭವನದ ಬೆಳವಣಿಗೆಗೋಸ್ಕರ ಶ್ರಮಿಸಿರುತ್ತಾರೆಂದು ಈ ಅಪಘಾತದಲ್ಲಿ ಇವರ ತಪ್ಪು ಕಂಡು ಬರುತ್ತಿಲ್ಲವೆಂದೂ ಕೂಡ, ಕಾರ್ಯದರ್ಶಿಗಳು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹಾಗೂ ಅಧ್ಯಕ್ಷರು, ಬಾಲಭವನ ಸೊಸೈಟಿ, ಇವರು ಶಿಫಾರಸ್ಸು ಮಾಡಿರುತ್ತಾರೆ. ಈ ಹಿನ್ನಲೆಯಲ್ಲಿ ಶ್ರೀಮತಿ ದಿವ್ಯಾನಾರಾಯಣಪ್ಪರವರ ವಿರುದ್ಧ ಆರೋಪವು ಸಾಬೀತಾಗಿರುವುದಿಲ್ಲವೆಂದು ಬಾಲಭವನದ ಕಾರ್ಯಕಾರಿ ಸಮಿತಿಯು ಸಹ ಶಿಫಾರಸ್ಸು ಮಾಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿ:1–7–2008 ರ ಮನವಿಯಲ್ಲಿ ಶ್ರೀಮತಿ ದಿವ್ಯಾನಾರಾಯಣಪ್ಪ ರವರು ತಾವು ಯಾವುದೇ ಅಪರಾಧ ಎಸಗಿರುವುದಿಲ್ಲವೆಂದು ತಿಳಿಸಿ ತಮ್ಮನ್ನು ಅಮಾನತ್ತುಗೊಳಿಸಿರುವ ಆದೇಶವನ್ನು ರದ್ದುಪಡಿಸಿ ಬಾಲಭವನದ ಆಡಳಿತಾಧಿಕಾರಿ ಕರ್ತವ್ಯದ ಹುದ್ದೆಗೆ ಹಿಂತೆಗೆದುಕೊಳ್ಳುವಂತೆ ಕೋರಿರುತ್ತಾರೆ.

ಸರ್ಕಾರವು ಶ್ರೀಮತಿ ಬಿಂದು, ಜಂಟಿ ನಿರ್ದೇಶಕರು (ಐಸಿಡಿಎಸ್), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹಾಗೂ ಕಾರ್ಯದರ್ಶಿಗಳು (ಪ್ರ), ಬಾಲಭವನ ಸೊಸೈಟಿ, ಬೆಂಗಳೂರು, ಇವರು ದಿ;30–6–2008 ರಂದು ಬಾಲಭವನದಲ್ಲಿ ಜರುಗಿದ ಘಟನೆಯ ಬಗ್ಗೆ ನಡೆಸಲಾದ ಪೂರ್ವಭಾವಿ ತನಿಖೆ ನಡೆಸಿ ನೀಡಿರುವ ವರದಿಯನ್ನ ಹಾಗೂ ಘಟನಾವಳಿಯಲ್ಲಿನ ವಾಸ್ತವತೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ದುರ್ಘಟನೆಯಲ್ಲಿ ಶ್ರೀಮತಿ ದಿವ್ಯಾನಾರಾಯಣಪ್ಪ ಆಡಳಿತಾಧಿಕಾರಿ, ಬಾಲಭವನ ಸೊಸೈಟಿ, ಇವರ ವಿರುದ್ಧ ಯಾವುದೇ ಆರೋಪ ಸಾಬಿತಾಗಿಲ್ಲದಿರುವುದನ್ನು ಗಮನಿಸಿ ಅವರನ್ನು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಿ ಅವರನ್ನು ಬಾಲಭವನದ ಹುದ್ದೆಯ ಕರ್ತವ್ಯಕ್ಕೆ ಪುನರ್ ಸ್ಥಾಪಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಮಇ 318 ಎಸ್ ಜೆಡಿ 2008 ಬೆಂಗಳೂರು, ದಿನಾಂಕ:8ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀಮತಿ ದಿವ್ಯಾನಾರಾಯಣಪ್ಪ, ಆಡಳಿತಾಧಿಕಾರಿ, ಬಾಲಭವನ ಸೊಸೈಟಿ, ಬೆಂಗಳೂರು, ಇವರನ್ನು ದಿ:1–7–2008 ರಂದು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಿ, ಇವರ ವಿರುದ್ಧ ಇರುವ ಆರೋಪಗಳನ್ನು ಹಿಂಪಡೆದು ಅವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಗೆ ಪುನರ್ ಸ್ಥಾಪಿಸಿ, ಬಾಲಭವನ ಸೊಸೈಟಿಯು ಆಡಳಿತಾಧಿಕಾರಿ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿ ಆದೇಶಿಸಿದೆ.

ಮುಂದುವರೆದು ದಿ:1–7–2008 ರಿಂದ ಇಲ್ಲಿಯವರೆಗಿನ ಅವಧಿಯನ್ನು "ಕರ್ತವ್ಯದ ಮೇಲಿದ್ದ ಅವಧಿ" ಯೆಂದು ಪರಿಗಣಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1052

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**URBAN DEVELOPMENT SECRETARIAT**

**Sub :** Appointment of Mithila Jha, as Intrastructure Planner /Analyst-in the Directorate of Urban Land Transport……Reg

**Read :** 1. Government Order No. UDD 134 BMR 2006 (1), Bangalore Dated:8.3.2007

2. Government Order No. UDD 134 BMR 2006 (2), Bangalore Dated:9.3.2007

**Preamble:**

Government of Karnataka has constituted Directorate of Urban Land Transport by order read (1) on the lines of National Urban Land Transport Policy, 2006 and recommendations of working group of transport system for 11th Plan. The National Urban Transport Policy, 2006 insist that UMTA should facilitate more co-ordinate planning and implementation of urban transport programmes and projects and integrated management of unrban transport systems. It further encourages the setting up of umbrella bodies that regulate the overall performance of the public transport systems and ensure that the city has a comprehensive public transport system. Hence, Bangalore Metriopolitan Land Transport Authority (BMLTA) was created.

One of the functions assigned to DULT is assessment and recommendation of new investments needed for creation of infrasturcture. Hence there is a need to strengthen the DULT with professionals having domain experience in the infrastructure sector. Smt. Mithila Jha has expressed her interest to work with the DULT in the area of transportation infrastructure planning. She holds an MSc. Degree in City planning with a specialization in developmental economics from the Massachusetts Institute of Technology (Cambridge, USA) Her previous academic background has been from institutions such as Lady Shri Ram College, and the Delhi School of Economics. Her work experience include working as an analyst for the institute for Community Inclusion, Boston, USA where she assisted in designing infrastructure for challenged people and integrating it into the universal design of buildings. She hasalso worked as Project co-coordinator with USAID-IFES, suggested ways of improve infrastructure to empower women and slums dwellers.

Given the above qualification and work-experience, it is felt necessary to utilize the services of Smt. Mithila Jha as Infrastructure Planner and Analyst in the DULT. Hence the following Order.

**Government Order No. UDD 5 CAR 2008, Bangalore Dated: 24th July 2008**

Government is pleased to accord sanction to utilize the services of Smt Mithila Jha as Infrastructure Planner and Analyst-in the Directorate of Urban Land Transport on Contract basis initially for a period of six months under the sanction post of Traffic Engineer. Her services can be utilized in the following areas:

a. Assessment of demand for public transport and facilities based on land use policies.

b. Evaluation of infrastructure for supporting public transport system.

c. Analysis of demand management measure to incentivize the use of public transport system.

d. Design investment strategies to enhance public transport facilities.

e. Any other work assigned by the Commissioner. DULT.

The services of Smt. Mithila Jha, Infrastructure Planner and Analyst will be utilized until such time the Commissioner, DULT deems fit.

Smt. Mithial Jha would be paid a consolidated compensation of Rs. 25,000.00 per month.

By Order and in the name of the Governor of Karnataka

P.R.1110

**KOUSALYA**

Under Secretary to Government

Urban Development Department

**Sub :** Appointment of Bhanu Chander Dabbikar and R. Revanna as Transport Planner-in the Directorate of Urban Land Transport.Reg

**Read :** 1. Government Order No. UDD 134 BMR 2006 (1), Bangalore Dated:8.3.2007

2. Government Order No. UDD 134 BMR 2006 (2), Bangalore Dated:9.3.2007

**Preamble:**

As per the recommendation for the National Working Group on Urban Transport for the 11th Plan and the guidelines of the National Urban Transport Policy, the Government of Karnataka in its Government Order read at (1) has created the State Directorate of Urban Land Transport (DULT) under the Urban Development Department. The key objective of the DULT is to ensure integration and coordination of land-use planning and development of transport related infrastucture in urban areas.

The functions of DULT has been defined in G.O. read at (1) with jurisdictions of seven Municipal Corporations in the State, viz., Bangalore Mysore, Mangalore, Hubli-Dharwad Belgaum, Gulbarga and Bellary, Accordingly, one of the key functions is to take up Comprehensive Traffic and Transportation Studies [CTTS] for six cities, excluding Bangalore.

The team under the Commissioner ,DULT is required to address the above mentioned critical areas on priority. It is noted that addressing these tasks and challenges requires the active role of specialists with multidisciplinary approaches. The specialists should have an understanding of the planning, technology for planning land use changes, planning with focus on mobility related aspects and capacity building competencies.

Sri Banu Chander Dabbikar, is pursuing Master in Planning with specialization in Transportation Planning from Schoold of Planning and Architecture-New Delhi, As a part ofacademic projects, he has understanding of issues related to whom travelpattern transport network, parking, Traffic management etc., He has also prepared Transport Plan for Mysore, Karnataka as a part of Academic Programme.

Sri R. Revanna who is post graduate scholar at the BMS College of Engg. Banglore for his Master Programme on Transportaion Engineering and Management. He has undertaken project of Traffic assignement on identified mass transport corridor and cost analysis as the part of academic programme. He has been also associated with transport related projects like a) Comprehensive Traffic and Trasportaion Plan for Bangalore b) Introduction of Bus Rapid Trabsit System for Mysore and Bangalore c) Bangalore Metro Rail etc., during 2006 to 2008.

Therefore it is felt necessary to utilize the services of Sri Bhanu Chander Dabbikar and Sri R. Revanna as Transport Planner in DULT. Hence the following Order.

**Government Order No. UDD 4 CAR 2008, Bangalore, Dated :23rd July 2008**

Government is pleased to accord sanction to utilize the services of Sri Bhanu Chander Dabbikar and Sri R. Revanna Transport Planners-in the Directorate of Urban Land Transport on Contract basis under the sanction post of Transport Planner initially for a period of one year on the following conditions.

1. Production of first class P.G. Certificates
2. The candidate shall furnish a bond with an undertaking toserve DULT for a minimum period of one year.
2. Their services can be utilized in the following areas:
1. Preparation of Comprehensive Traffic and Transportation Plan for Six city Corporations.

2. Peridic assessment of travel demand in given Urban Area.

3. Determination of level of requirements to public transport and type of transport system on different corridors.

4. Setting of policy guidelines for development of total network in Urban Area

5. Road Network Planning in the Urban Area.

6. Any other work assigned by the Commissioner, DULT.

3. The services of Sri Bhanu Chander Dabbikzar and Sri R. Revanna will be utilized until such time the Commissioner, DULT deems fit.

4. Sri Bhanu Chander Dabbikar would be paid a consolidated compensation of Rs. 30,000/-and Sri R. Revanna Rs. 25,000/- per month.

By Order and in the name of the Governor of Karnataka

P.R. 1111

**KOUSALYA**

Under Secretary to Government

Urban Development Department

**PUBLIC WORKS, PORTS & INLAND WATER TRANSPORT SECRETARIAT**

**Sub :** Development of Airport in Karnataka-Hassan Airport transfer of work to Infrastructure Development Department-reg

**Read :** 1. GO. NO. IDD 16 DIA 2003, dated 30.3.2007

2. GO. No. PWD 2 PCA 2007 dated 17.4.2007

3. GO.No. PWD 2 PCA 2007 dated12.7.2007

**Preamble:**

The Infrastructure Development Department had accorded sanction for establishment of a Green Field Airport at Hassan through Public-Private Parnership and enstrusted the responsibility of developing this Airport to Public Works, Ports and Inland Water Transport Department vide Government Order No. IDD 16 DIA 2003 dated 30.3.2007.

Subsequently the Public Works Department vide Government Order No. PWD 2 PCA 2007 dated 12.7.2007 had accorded sanction to award the work of establishing the Greenfield Airport at Hassan to M/s Jupiter Aviation and Logistics Limited onm DBOT (Design Build Operate Transfer) Basis after accepting their negotiated lease rent of Rs. 1100.00 (Rupees One Thousand and One Hundred only) per acre per year payable to the Government subject to the condition ofexecuting the Concession Agreement. Sanction was also accorded to handover of 960 acres of land to M/s Jupiter Aviation and Logistics on leases basis for a period of 30 years which could be extended by another 30 years subject to mutual concurrence.

A Concession Agreement was executed between Government and M/s Jupiter Aviation and Logistics Private Limited and the work is now under progress.

As per the Karnataka Government (Allocation of Business) Rules 1977 matters relating to Airport are to be dealt by Infrastructure Development Department. Accordingly all matters with regard to development of Airport need to be dealt in Infrastructure Development Department.

It is therefore desirable that all matter relating to establishment of Airport in the state should be dealt in the Infrastructure Development Department for efficient implementation and for uniformity in the approaches and principales. In view of this, it is felt that the matter relating to establishment of Hassan

Airport which was entrusted to Public Works, Ports and Inland Water Transport Department vide GO.N o. IDD 16 DIA 2003 dated 30.3.2007 may be transferred to the Infrastructure Development Department.

Hence the following Order.

**Government Order No. PWD 1 PCA 2008, Bangalore, Dated:26th July, 2008**

Government are pleased to transfer the work pertaining to establishment of a Green Field Airport at Hassan to Infrastructure Development Department from Public Works and Inland Water Transport Department with immediate effect.

This order is issued with the concurrence of Infrastructure Development Department vide note No. P.S. IDD 487 dated 13.5.2008 and Finance Department vide note No. PWD 266 FC-3/2008 dated 22.5.2008.

By Order and in the name of the Governor of Karnataka

P.R. 1113

**N.S. VISHWANATH**
Under Secretary to Government
Public Works, Ports & Inland
Water Transport Department (Ports)

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಸಮಗ್ರ ನೀರು ಸರಬರಾಜು ಯೋಜನೆಯಡಿ ಚಿತ್ರದುರ್ಗ ಜಿಲ್ಲೆ ಮೊಳಕಲ್ಮೂರು ಪಟ್ಟಣಕ್ಕೆ ರಂಗಯ್ಯನದುರ್ಗ ಜಲಾಶಯದಿಂದ ನೀರು ಸರಬರಾಜು ಮಾಡುವ ಯೋಜನೆಯ ಪರಿಷ್ಕೃತ ಅಂದಾಜು ವೆಚ್ಚ ರೂ. 295.70 ಲಕ್ಷಗಳು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ನಅಇ 01 ಯುಡಬ್ಲ್ಯೂಎಸ್– 2005 ದಿ:9.10.2006
2 ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ರವರ ಪತ್ರ ಸಂಖ್ಯೆ: ಕಜಮಂ:ತಾಂತ್ರಿಕ:ಡಿ.ಸಿ.ಇ1:ಟಿ.ಎ–8:ಎಂಎಲ್‌ಕೆ–ಡಬ್ಲ್ಯೂಎಸ್‌ಎಸ್–ಆರ್‌ಇ:3507:2007–:8 ದಿ:19.2.08
3 ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ರವರ ಅಧ್ಯಕ್ಷತೆಯಲ್ಲಿ ದಿ:16.5.2008ರಂದು ನಡೆದ ಸಭೆಯ ನಡವಳಿ

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೊಳಕಾಲ್ಮೂರು ಪಟ್ಟಣಕ್ಕೆ ರಂಗಯ್ಯನದುರ್ಗ ಜಲಾಶಯದಿಂದ ರೂ. 160.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕುಡಿಯುವ ನೀರಿನ ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿತ್ತು. ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ದಿನಾಂಕ:19.10.2006ರ ಆದೇಶದನ್ವಯ ಕಾಮಗಾರಿಯನ್ನು ಕೈಗೆತ್ತಿಕೊಂಡು ಟೆಂಡರ್ ಕರೆದು 2 ಪ್ಯಾಕೆಜ್‌ಗಳಲ್ಲಿ ಗುತ್ತಿಗೆದಾರರಿಗೆ ವಹಿಸಿದ್ದು, ಟೆಮಡರ್ ಪ್ರೀಮಿಯಂ ಮತ್ತು ಹೆಚ್ಚುವರಿ ಕಾಮಗಾರಿಗಳನ್ನೊಳಗೊಂಡಂತೆ ಯೋಜನೆಯ ಪರಿಷ್ಕೃತ ಅಂದಾಜು ವೆಚ್ಚ ರೂ. 295.70 ಲಕ್ಷ್ಗಗಳಾಗಿದ್ದು ಇದರಿಂದ ಯೋಜನೆಯ ಹೆಚ್ಚುವರಿ ಅಂದಾಜು ವೆಚ್ಚ ರೂ. 135.70 ಲಕ್ಷಗಳಾಗಿದ್ದು ಪರಿಷ್ಕೃತ ಅಂದಾಜು ವೆಚ್ಚಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲು ಕೋರಿರುತ್ತಾರೆ. ಯೋಜನೆಯ ಪರಿಷ್ಕೃತ ಅಂದಾಜು ವೆಚ್ಚವನ್ನು 2008–09 ನೇ ಸಾಲಿನ ಮಂಡಳಿಯ ಕ್ರಿಯಾ ಯೋಜನೆಯ ಪ್ರಸ್ತಾವನೆಯಲ್ಲಿ ಪ್ರವರ್ಗ 'ಎ' ನಲ್ಲಿ ಸೇರಿಸಲಾಗಿದೆ ಈ ಬಗ್ಗೆ ದಿನಾಂಕ:16.5.2008ರಂದು ಸರ್ಕಾರದ ನಗರಾಭಿವೃದ್ಧಿ ಇಲಾಖೆಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಮೊಳಕಾಲ್ಮೂರು ಪಟ್ಟಣಕ್ಕೆ ನೀರು ಸರಬರಾಜು ಯೋಜನೆಯ ಟೆಂಡರ್ ಪ್ರೀಮಿಯಂ, ಎಸ್ಕೆಲೆಷನ್ ಇತ್ಯಾದಿಗಳ ಏರಿಕೆಯಿಂದಾಗಿ ರೂ. 160.00 ಲಕ್ಷಗಳಿಗೆ ಸಲ್ಲಿಸಲಾದ ಮೂಲ ಅಂದಾಜು ವೆಚ್ಚವನ್ನು ರೂ. 295.70 ಲಕ್ಷಗಳಿಗೆ ಪರಿಷ್ಕರಿಸಿ ಮಂಡಳಿಯು ಸಲ್ಲಿಸಿರುವ ಪ್ರಸ್ತಾವನೆಯನ್ನು ಒಪ್ಪಿಕೊಳ್ಳಲು ತೀರ್ಮಾನಿಸಲಾಯಿತು. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 16 ಯುಡಬ್ಲ್ಯೂಎಸ್ 2008, ಬೆಂಗಳೂರು, ದಿನಾಂಕ: 1ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ಅಂಶಗಳನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದ ನಂತರ, ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ಪಟ್ಟಣಕ್ಕೆ ರಂಗಯ್ಯನದುರ್ಗ ಜಲಾಶಯದಿಂದ ನೀರು ಸರಬರಾಜು ಮಾಡುವ ಯೋಜನೆಯನ್ನು ರೂ. 160.00 ಲಕ್ಷಗಳ ಮೂಲ ಅಂದಾಜಿನಿಂದ ಪರಿಷ್ಕೃತ ಅಂದಾಜು ಮೊತ್ತ ರೂ. 295.70 ಲಕ್ಷಗಳಿಗೆ (ಇನ್ನೂರ ತೊಂಬತ್ತೈದು ಲಕ್ಷ ಮತ್ತು ಎಪ್ಪತ್ತು ಸಾವಿರ ರೂ.ಗಳಿಗೆ ಮಾತ್ರ) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಪ್ರಸ್ತಾವನೆಗೆ ಸರ್ಕಾರದ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ. ಸರ್ಕಾರಿ ಆದೇಶ ಸಂಖ್ಯೆ:ನಅಇ 01 ಯುಡಬ್ಲ್ಯೂಎಸ್ 2005 ದಿನಾಂಕ:9.10.2006 ರಲ್ಲಿ ವಿಧಿಸಿರುವ ಇತರೆ ಷರತ್ತು ಮತ್ತು ನಿಬಂಧನೆಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ–1 ಟಿಎಫ್‌ಸಿ 2008 ದಿನಾಂಕ:16.5.2008ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1162

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಸುರೇಶ್‌ಜಿರ್ಲಿ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗದಗ್ ಜಿಲ್ಲೆ ಇವರಿಗೆ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ ಇವರ ಪ್ರಸ್ತಾವನೆ ಸಂ:ಕಂದಾಯ:ಸಿಬ್ಬಂದಿ–2:2004–05, ದಿನಾಂಕ:8.12.2004
2 ಜಿಲ್ಲಾಧಿಕಾರಿಗಳು, ಗದಗ್ ಜಿಲ್ಲೆ ಇವರ ಪ್ರಸ್ತಾವನೆ ಸಂ;ಸಿಬ್ಬಂದಿ 1/ವಹಿ–122/2007–08, ದಿನಾಂಕ:27–2–2008.
3 ಮಹಾಲೇಖಪಾಲರು (ಎ&ಇ), ಇವರ ಪತ್ರ ಸಂ: GE1/R-4/Vol-423/04-05/623,Dt:3.11.2008

**ಪ್ರಸ್ತಾವನೆ:**

ಮೇಲೆ (1) ಮತ್ತು (2) ರಲ್ಲಿ ಓದಲಾದ ಜಿಲ್ಲಾಧಿಕಾರಿಗಳು, ಕೊಪ್ಪಳ ಹಾಗೂ ಗದಗ್ ಜಿಲ್ಲೆ ಇವರ ಪ್ರಸ್ತಾವನೆಗಳಲ್ಲಿ ಶ್ರೀ ಸುರೇಶ್ ಜಿರ್ಲಿ, ಚುನಾವಣಾ ತಹಶೀಲ್ದಾರ್, ಗದಗ್ ಜಿಲ್ಲೆ ಇವರು ವೇತನ ಶ್ರೇಣಿ ರೂ. 6,000–11,200 (ಹಿಂದಿನ ವೇತನ ಶ್ರೇಣಿ) ರಲ್ಲಿ ದಿನಾಂಕ:1.10.2001 ರಿಂದ ಗರಿಷ್ಟ ಹಂತ ತಲುಪಿರುವುದರಿಂದ ದಿನಾಂಕ:1.10.2002 ರಿಂದ ಅನ್ವಯವಾಗುವಂತೆ 5 ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವಂತೆ ಪ್ರಸ್ತಾಪಿಸಿರುತ್ತಾರೆ. ಮೇಲೆ (3)ರಲ್ಲಿ ಓದಲಾದ ಮಹಾಲೇಖಪಾಲರು, ಕರ್ನಾಟಕ ಬೆಂಗಳೂರು ಇವರ ದಿನಾಂಕ:3.11.2004ರ ವರದಿಯಲ್ಲಿ ದಿನಾಂಕ:1.10.2002 ರಿಂದ ಸ್ಥಗಿತ ವೇತನ ಬಡ್ತಿಗೆ ಅರ್ಹರಿರುವುದಾಗಿ ತಿಳಿಸಿರುತ್ತಾರೆ.

ಸರ್ಕಾರವು ಜಿಲ್ಲಾಧಿಕಾರಿಗಳು, ಗದಗ್ ಜಿಲ್ಲೆ ಮತ್ತು ಮತ್ತು ಮಹಾಲೇಖಪಾಲರು ಕರ್ನಾಟಕ ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ರೂ. 6,000–11,200 ರ ವೇತನ ಶ್ರೇಣಿಯಲ್ಲಿ ದಿನಾಂಕ:1.10.2002 ರಿಂದ ಅನ್ವಯವಾಗುವಂತೆ ಒಟ್ಟು ಮೂರು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಲು ನಿರ್ಧರಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 315 ಎಎಸ್‌ಡಿ 2008, ಬೆಂಗಳೂರು, ದಿನಾಂಕ:5ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀ ಸುರೇಶ್‌ಜಿರ್ಲಿ, ಚುನಾವಣಾ ತಹಶೀಲ್ದಾರ್, ಗದಗ್ ಜಿಲ್ಲೆ, ಇವರಿಗೆ ವೇತನ ಶ್ರೇಣಿ ರೂ. 6,000–11,200 ರಲ್ಲಿ ಈ ಕೆಳಕಂಡ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿ ಆದೇಶಿಸಿದೆ.

1) ದಿನಾಂಕ:1.10.2002 ರಿಂದ ಮೊದಲನೇ ಸ್ಥಗಿತ ವೇತನ ಬಡ್ತಿ
2) ದಿನಾಂಕ;1.10.2003 ರಿಂದ ಎರಡನೇ ಸ್ಥಗಿತ ವೇತನ ಬಡ್ತಿ
3) ದಿನಾಂಕ: 1.10.2004 ರಿಂದ ಮೂರನೇ ಸ್ಥಗಿತ ವೇತನ ಬಡ್ತಿ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1164

**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶಿವಮೊಗ್ಗ ನಗರದ ಖಾಸಗಿ ಬಸ್ ನಿಲ್ದಾಣ ಮತ್ತು ಹಾಲಿ ಇರುವ ಕೆ.ಎಸ್.ಆರ್.ಟಿ.ಸಿ., ಡಿಪೋದಿಂದ ಮಿಳ್ಳಗಟ್ಟಿ ಕೆರೆ ಸ.ನಂ.104ರ ಮೂಲಕ ವರ್ತುಲ ರಸ್ತೆ ಸೇರುವಂತೆ ಸಂಪರ್ಕ ರಸ್ತೆ ಅಭಿವೃದ್ಧಿ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಪತ್ರ ಸಂಖ್ಯೆ:ನಅಇ;3:ಬೆಂರೂಪ್ರಾ 07 ದಿ:5–3–2007

2 ಸರ್ಕಾರದ ಪತ್ರ ಸಂಖ್ಯೆ:ನಅಇ:3:ಬೆಂರೂಪ್ರಾ 07 ದಿ:19.3.2008

3 ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆ:ಶಿನಪ್ರಾ:ತಾಂ:ಕಬನಿ:ಸಂ ರಸ್ತೆ:2008–09/324 ದಿ 7–7–2007

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಸರ್ಕಾರದ ಪತ್ರದಲ್ಲಿ ಶಿವಮೊಗ್ಗ ನಗರದ ಖಾಸಗಿ ಬಸ್ ನಿಲ್ದಾಣದಿಂದ ಸರ್ವೆ ನಂ 104ರ ಮಿಳ್ಳಗಟ್ಟಿ ಕೆರೆ ಮುಖಾಂತರ 100 ಅಡಿ ವರ್ತುಲ ರಸ್ತೆಯನ್ನು ಸಂಪರ್ಸಿಸುವ ಸಂಪರ್ಕ ರಸ್ತೆಯನ್ನು ಅಭಿವೃದ್ಧಿಪಡಿಸುವ ಸಲುವಾಗಿ ಶಿವಮೊಗ್ಗ ನಗರ ಸಭೆ ವೆಚ್ಚದಲ್ಲಿ ಯೋಜನೆಯನ್ನು ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದಿಂದ ಕೈಗೆತ್ತಿಕೊಳ್ಳಲು ರೂ. 471–00 ಲಕ್ಷಗಳಿಗೆ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 15ಬಿ ರನ್ವಯ ಸರ್ಕಾರದ ಅನುಮೋದನೆ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಸರ್ಕಾರದ ಪತ್ರ ದಿನಾಂಕ:19–3–2008ರಲ್ಲಿ ಶಿವಮೊಗ್ಗ ನಗರದ ಕೆ.ಎಸ್.ಆರ್.ಟಿ.ಸಿ ಬಸ್ ಡಿಪೋ ಹಿಂಭಾಗದಿಂದ ಮಿಳ್ಳಗಟ್ಟಿ ಕೆರೆ ಮತ್ತು ಮಂಡಳಿ ಮುಖಾಂತರ 100 ಅಡಿ ರಿಂಗ್ ರಸ್ತೆಗೆ 60 ಮತ್ತು 80 ಅಡಿ ರಸ್ತೆ ನಿರ್ಮಿಸುವ ಬಗ್ಗೆ 62 ಜನರಿಗೆ 6x9 ಮೀ. ಅಳತೆಯ ನಿವೇಶನವನ್ನು ಹಾಗೂ ಪರಿಹಾರ ಧನ ರೂ. 1,09,63,760–00ನ್ನು ಪಾವತಿಸಿ ಸದರಿಯವರಿಗೆ ಸೇರಿದ ನಿವೇಶನ ಕಟ್ಟಡಗಳನ್ನು ಪ್ರಸ್ತಾಪಿತ 80 ಮತ್ತು 60 ಅಡಿಗಳ ರಸ್ತೆ ನಿರ್ಮಾಣಕ್ಕಾಗಿ ಭೂ ಸ್ವಾಧಿನಪಡಿಸಲು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 35ರನ್ವಯ ಅನುಮೋದನೆ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿನ ಪ್ರಾಧಿಕಾರದ ಪತ್ರ ದಿನಾಂಕ:7–7–2008ರಲ್ಲಿ ಭೂ ಸ್ವಾಧೀನ ವೆಚ್ಚ ಶಿವಮೊಗ್ಗ ನಗರದ ಉಪನೋಂದಾಣಾಧಿಕಾರಿಗಳ ದರಪಟ್ಟಿಯಂತೆ ರೂ. 18.00 ಲಕ್ಷಗಳಾಗುತ್ತದೆ. ಉದ್ದೇಶಿತ ರಸ್ತೆಗಳ ಒಟ್ಟು ಭೂ ಸ್ವಾಧೀನ ವೆಚ್ಚ ರೂ. 1,27,64,000ಗಳಾಗಬಹುದೆಂದು ಅಂದಾಜಿಸಿದೆ. ಅಲ್ಲದೆ ಕೆರೆ ಪ್ರದೇಶದಲ್ಲಿ 1.45 ಕಿ.ಮೀ ರಸ್ತೆ, ಅಭಿವೃದ್ಧಿಪಡಿಸುವ ಬಗ್ಗೆ ರೇಖಾ ಅಂದಾಜು ತಯಾರಿಸಿದ್ದು, ಸದರಿ ರಸ್ತೆ ನಿರ್ಮಾಣಕ್ಕೆ ಒಟ್ಟು ರೂ. 315.00ಲಕ್ಷಗಳು ಹಾಗೂ ವಿದ್ಯುತ್ ಸಂಪರ್ಕ ಕಲ್ಪಸಲು ರೂ. 28.36 ಲಕ್ಷಗಳಾಗುತ್ತದೆ ಎಂದು ಅಂದಾಜಿಸಲಾಗಿದೆ.

ಮೇಲ್ಕಂಡ ಅಂಶಗಳಂತೆ, ಉದ್ದೇಶಿತ ಸಂಪರ್ಕ ರಸ್ತೆಯ ಅಂದಾಜು ವೆಚ್ಚ, ಭೂಸ್ವಾಧೀನ ಸೇರಿದಂತೆ 471–00 ಲಕ್ಷಗಳಾಗುತ್ತದೆ. ಪೌರಾಯುಕ್ತರು ನಗರಸಭೆ, ಶಿವಮೊಗ್ಗ ಇವರು ರೂ. 471–00 ಲಕ್ಷಗಳನ್ನು ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ನೀಡಿರುತ್ತಾರೆ. ಆದುದರಿಂದ ಈ ಯೋಜನೆಯನ್ನು ಆದ್ಯತೆ ಮೇರೆಗೆ ಕೈಗೆತ್ತಿಕೊಂಡು ಪೂರ್ಣಗೊಳಿಸಬೇಕಾಗಿರುವುದರಿಂದ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 87 ಬೆಂರೂಪ್ರಾ 2008 ಬೆಂಗಳೂರು, ದಿನಾಂಕ:26ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಶಿವಮೊಗ್ಗ ನಗರದ ಖಾಸಗಿ ಬಸ್ ನಿಲ್ದಾಣ ಮತ್ತು ಹಾಲಿ ಇರುವ ಕೆ.ಎಸ್.ಆರ್.ಟಿ.ಸಿ., ಡಿಪೋದಿಂದ ಮಿಳ್ಳಗಟ್ಟಿ ಕೆರೆ ಸ.ನಂ. 104 ಹಾಗೂ ಮಿಳ್ಳಗಟ್ಟಿ ಕೆರೆಯ ಮೂಲಕ ವರ್ತುಲ ರಸ್ತೆ ಸೇರುವ, ಸಂಪರ್ಕ ರಸ್ತೆಯನ್ನು ಭೂಸ್ವಾಧೀನದೊಂದಿಗೆ ರೂ 471–00 ಲಕ್ಷಗಳ ವೆಚ್ಚದಲ್ಲಿ ಕೈಗೊಳ್ಳುವ ಅಭಿವೃದ್ಧಿ ಯೋಜನೆಗೆ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಸೆಕ್ಷನ್ 18(3)ರ ಅಡಿಯಲ್ಲಿ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1119

**ಸಿ.ಟಿ ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಹಾವೇರಿ ಜಿಲ್ಲೆ, ಹಾವೇರಿ/ಹಾನಗಲ್/ರಾಣೇಬೆನ್ನೂರ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೇಗೇರಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪತ್ರ ಸಂಖ್ಯೆ:ಸಿಬಿಎನ್/ಹೈಆ್ಯಸೆ/ಕಸಂ–7/3/ಶಾಸಮ/03283/ಗ್ರಾರಮೇ07–08,ದಿನಾಂಕ:30–6–2007.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರು ಹಾವೇರಿ ಜಿಲ್ಲೆ, ಹಾವೇರಿ, ಹಾನಗಲ್, ರಾಣೇಬೆನ್ನೂರ ತಾಲ್ಲೂಕಿನ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ತುಂಬಾ ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿದ್ದು, ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿದೆ ಎಂದು ವರದಿ ಮಾಡಿರುತ್ತಾರೆ.

| ಕ್ರ.ಸಂ | ತಾಲ್ಲೂಕು | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ (ರ.ಉದ್ದ) |
|---|---|---|---|
| 1 | ಹಾವೇರಿ/ಹಾನಗಲ್ | ಸಂಗೂರ–ತಿಳವಳ್ಳಿ ರಸ್ತೆಯಿಂದ ಬಿದರಗಡ್ಡಿ ಗ್ರಾಮಕ್ಕೆ ಕೂಡು ರಸ್ತೆ(ಹಾವೇರಿ –ಹಾನಗಲ್ ಗಡಿಭಾಗದವರೆಗೆ) | 4.00 |
| 2 | ರಾಣೇಬೆನ್ನೂರ | ಕುಪ್ಪೇಲೂರ ಕ್ರಾಸ್‌ನಿಂದ ದಂಡಗೀಹಳ್ಳಿ ರಸ್ತೆ, ಮಾರ್ಗ ಚಿಕ್ಕಮಾಗನೂರ | 7.50 |
| | | ಒಟ್ಟು | 11.50 |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಲೋಇ 614 ಸಿಆರ್‌ಎಂ 2008, ಬೆಂಗಳೂರು, ದಿನಾಂಕ:5ನೇ ಆಗಸ್ಟ್ 2008**

ಹಾವೇರಿ ಜಿಲ್ಲೆ/ಹಾನಗಲ್/ರಾಣೇಬೆನ್ನೂರ ತಾಲ್ಲೂಕಿನ ಒಟ್ಟಾರೆ 11.50 ಕಿ.ಮೀ ಉದ್ದದ ಈ ಕೆಳಕಂಡ ಎರಡು (2) ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ.ಸಂ | ತಾಲ್ಲೂಕು | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ (ರ.ಉದ್ದ) |
|---|---|---|---|
| 1 | ಹಾವೇರಿ | ಸಂಗೂರ–ತಿಳವಳ್ಳಿ ರಸ್ತೆಯಿಂದ ಬಿದರಗಡ್ಡಿ ಗ್ರಾಮಕ್ಕೆ ಕೂಡು ರಸ್ತೆ (ಹಾವೇರಿ–ಹಾನಗಲ್ ಗಡಿಭಾಗದವರೆಗೆ) | 4.00 |
| 2 | ರಾಣೇಬೆನ್ನೂರ | ಕುಪ್ಪೇಲೂರ ಕ್ರಾಸ್‌ನಿಂದ ದಂಡಗೀಹಳ್ಳಿ ರಸ್ತೆ ಮಾರ್ಗ ಚಿಕ್ಕಮಾಗನೂರ | 7.50 |
| | | ಒಟ್ಟು | 11.50 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1158

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೊಗಿ, ಬಂದರು ಮತ್ತು

ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ವಿಷಯ:** ನಂಜನಗೂಡು ತಾಲ್ಲೂಕು ಕೌಲಂದೆ ಹೋಬಳಿಯಲ್ಲಿರುವ ನಂಜನಗೂಡು ಉಪವಿಭಾಗದ ವ್ಯಾಪ್ತಿಗೆ ಬರುವ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರ ಸಂಖ್ಯೆ:ಮುಇಂ/ಸಂಕದ/ರುಶಾ/ಸಇಂ–1/08–09 ದಿನಾಂಕ:24–7–2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು, ಇವರು ಮೈಸೂರು ಜಿಲ್ಲೆ, ನಂಜನಗೂಡು ತಾಲ್ಲೂಕಿನ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ನಿಗದಿತ ನಮೂನೆಯಲ್ಲಿ ಅಗತ್ಯ ದಾಖಲಾತಿಗಳೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ.ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ(ರ ಉದ್ದ) |
|---|---|---|
| 1 | ನಂಜನಗೂಡು ತಾಲ್ಲೂಕು ಕಲ್ಲುಂದ–ಕಾಂಮಹಳ್ಳಿ–ತಗಡೂರು ದೇವನೂರು ಮಾರ್ಗ ದೊಡ್ಡ ಕೌಲಂದೆ ಸೇರುವ ಜಿಲ್ಲಾ ಮುಖ್ಯ ರಸ್ತೆಯಿಂದ ಚಿನ್ನಂಬಳ್ಳಿ ಮಾರ್ಗ ಶ್ರೀ ಸಿದ್ದೇಶ್ವರಸ್ವಾಮಿ ದೇವಸ್ಥಾನಕ್ಕೆ ಸೇರುವ ರಸ್ತೆ. | 4.70 |

| | | |
|---|---|---|
| 2 | ನಂಜನಗೂಡು ತಾಲ್ಲೂಕು ಕಲ್ಕುಂದ–ಕಾಮಹಳ್ಳಿ–ತಗಡೂರು ದೇವನೂರು ಮಾರ್ಗ ದೊಡ್ಡ ಕೌಲಂದೆ ಸೇರುವ ರಸ್ತೆಯಿಂದ ಕಾರೇಪುರ ಕಾರ್ಯ ಶ್ರೀ ಸಿದ್ದೇಶ್ವರಸ್ವಾಮಿ ದೇವಸ್ಥಾನದ ಮಾರ್ಗ ಬಾಗಲಕೋಟೆ–ಬಿಳಿಗಿರಿರಂಗನಬೆಟ್ಟ–ರಾಜ್ಯ ಹೆದ್ದಾರಿ (57) ಸೇರುವ ರಸ್ತೆ | 8.40 |
| | **ಒಟ್ಟು** | 13.10 |

ಮೇಲ್ಕಂಡ ಎರಡು ರಸ್ತೆಗಳು ಜಿಲ್ಲಾ ಮುಖ್ಯ ರಸ್ತೆಯಿಂದ ಪ್ರಾರಂಭವಾಗಿ ಶ್ರೀ ಸಿದ್ದೇಶ್ವರ ಸ್ವಾಮಿ ದೇವಸ್ಥಾನವನ್ನು ಸಂಪರ್ಕಿಸಿ ರಾಜ್ಯ ಹೆದ್ದಾರಿಯನ್ನು ಸಂಪರ್ಕಿಸುವ ರಸ್ತೆಗಳಾಗಿರುವುದರಿಂದ, ಈ ರಸ್ತೆಯ ಅಭಿವೃದ್ಧಿಯನ್ನು ಕೈಗೆತ್ತಿಕೊಳ್ಳಲು ಶಿಫಾರಸ್ಸು ಮಾಡಲಾಗಿದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಲೋಇ 411 ಸಿಆರ್‌ಎಂ 2008, ಬೆಂಗಳೂರು ದಿನಾಂಕ:5ನೇ ಆಗಸ್ಟ್ 2008**

ಮೈಸೂರು ಜಿಲ್ಲೆ ನಂಜನಗೂಡು ತಾಲ್ಲೂಕಿನ ಒಟ್ಟು 13.10 ಕಿ.ಮೀ ಉದ್ದ ಈ ಕೆಳಕಂಡ ಎರಡು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ.ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ(ರ ಉದ್ದ) |
|---|---|---|
| 1 | ನಂಜನಗೂಡು ತಾಲ್ಲೂಕು ಕಲ್ಕುಂದ–ಕಾಮಹಳ್ಳಿ–ತಗಡೂರು ದೇವನೂರು ಮಾರ್ಗ ದೊಡ್ಡ ಕೌಲಂದೆ ಸೇರುವ ಜಿಲ್ಲಾ ಮುಖ್ಯ ರಸ್ತೆಯಿಂದ ಚಿನ್ನಂಬಳ್ಳಿ ಮಾರ್ಗ ಶ್ರೀ ಸಿದ್ದೇಶ್ವರಸ್ವಾಮಿ ದೇವಸ್ಥಾನಕ್ಕೆ ಸೇರುವ ರಸ್ತೆ. | 4.70 |
| 2 | ನಂಜನಗೂಡು ತಾಲ್ಲೂಕು ಕಲ್ಕುಂದ–ಕಾಮಹಳ್ಳಿ–ತಗಡೂರು ದೇವನೂರು ಮಾರ್ಗ ದೊಡ್ಡ ಕೌಲಂದೆ ಸೇರುವ ರಸ್ತೆಯಿಂದ ಕಾರೇಪುರ ಕಾರ್ಯ ಶ್ರೀ ಸಿದ್ದೇಶ್ವರಸ್ವಾಮಿ ದೇವಸ್ಥಾನದ ಮಾರ್ಗ ಬಾಗಲಕೋಟೆ–ಬಿಳಿಗಿರಿರಂಗನಬೆಟ್ಟ–ರಾಜ್ಯ ಹೆದ್ದಾರಿ (57) ಸೇರುವ ರಸ್ತೆ | 8.40 |
| | **ಒಟ್ಟು** | 13.10 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1159

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೊಗಿ, ಬಂದರು ಮತ್ತು

ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಮೈಸೂರಿನ ಸರ್ಕಾರಿ ಆಯುರ್ವೇದ ವೈದ್ಯಕೀಯ ಕಾಲೇಜು 2008ನೇ ಸಾಲಿನಲ್ಲಿ 100 ವರ್ಷಗಳನ್ನು ಪೂರೈಸುವ ಹಿನ್ನಲೆಯಲ್ಲಿ ಶತಮಾನೋತ್ಸವ ಆಚರಿಸಲು ಸಮಿತಿಯನ್ನು ರಚಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 118 ಪಿಟಿಡಿ 2008, ಬೆಂಗಳೂರು, ದಿನಾಂಕ:1ನೇ ಆಗಸ್ಟ್ 2008**

ಸರ್ಕಾರಿ ಆಯುರ್ವೇದ ವೈದ್ಯಕೀಯ ಕಾಲೇಜು ಮೈಸೂರು 1908ರಲ್ಲಿ ಆರಂಭವಾಗಿ 2008ನೇ ಸಾಲಿನಲ್ಲಿ 100 ವರ್ಷಗಳು ತುಂಬಿರುವ ಹಿನ್ನಲೆಯಲ್ಲಿ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. 2008ರ ಸೆಪ್ಟೆಂಬರ್ ಮಾಹೆಯಲ್ಲಿ ಶತಮಾನೋತ್ಸವನ್ನು ಆಚರಿಸಲು ಉದ್ದೇಶಿಸಲಾಗಿದ್ದು, ಈ ಎಲ್ಲಾ ಕಾರ್ಯಕ್ರಮಗಳು ಸುಗಮವಾಗಿ, ಸುವ್ಯವಸ್ಥಿತವಾಗಿ ಹಾಗೂ ವಿಜೃಂಭಣೆಯಿಂದ ನಡೆಸಬೇಕಾಗಿರುವುದರಿಂದ ಈ ಕಾರ್ಯಕ್ರಮಗಳನ್ನು ಯೋಜಿಸಿ, ನಿರ್ವಹಿಸಲು ಹಾಗೂ ಸಂಯೋಜನೆ, ಆಯುರ್ವೇದ ಸಮ್ಮೇಳನ ಮತ್ತಿತರ ಕಾರ್ಯಕ್ರಮಗಳ ನಿರ್ವಹಣೆಗಾಗಿ ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡ ಸಮಿತಿಯನ್ನು ರಚಿಸಿದೆ.

| | | |
|---|---|---|
| 1 | ಕರ್ನಾಟಕ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳು | ಗೌರವಾಧ್ಯಕ್ಷರು |
| 2 | ಕರ್ನಾಟಕ ಸರ್ಕಾರದ ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು | ಅಧ್ಯಕ್ಷರು |

| | | |
|---|---|---|
| 3 | ಕರ್ನಾಟಕ ಸರ್ಕಾರದ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು | ಸದಸ್ಯರು |
| 4 | ಮೈಸೂರು ಜಿಲ್ಲೆಯ ಉಸ್ತುವಾರಿ ಸಚಿವರು | ಸದಸ್ಯರು |
| 5 | ಮೈಸೂರು ಲೋಕಸಭಾ ಸದಸ್ಯರು | ಸದಸ್ಯರು |
| 6 | ಚಾಮರಾಜ ಕ್ಷೇತ್ರದ ಶಾಸಕರು | ಸದಸ್ಯರು |
| 7 | ಮೈಸೂರು ಜಿಲ್ಲೆಯ ವಿಧಾನಸಭೆ/ವಿಧಾನಪರಿಷತ್/ರಾಜ್ಯ ಸಭೆಯ ಎಲ್ಲ ಸದಸ್ಯರು | ಸದಸ್ಯರು |
| 8 | ಶ್ರೀ ಶ್ರೀಕಂಠದತ್ತ ಒಡೆಯರ್, ಮಾಜಿ ಲೋಕಸಭಾ ಸದಸ್ಯರು | ಸದಸ್ಯರು |
| 9 | ಕಾರ್ಯದರ್ಶಿಗಳು, ವೈದ್ಯಕೀಯ ಶಿಕ್ಷಣ ಇಲಾಖೆ | ಸದಸ್ಯರು |
| 10 | ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 11 | ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು | ಸದಸ್ಯರು |
| 12 | ಮೈಸೂರು ಜಿಲ್ಲಾಧಿಕಾರಿಗಳು | ಸದಸ್ಯರು |
| 13 | ಮೈಸೂರು ನಗರಪಾಳಿಕೆ ಮೇಯರ್ | ಸದಸ್ಯರು |
| 14 | ಅಧ್ಯಕ್ಷರು/ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ | ಸದಸ್ಯರು |
| 15 | ವ್ಯವಸ್ಥಾಪಕ ನಿರ್ದೇಶಕರು, ಮೆಸ್ಕಾಂ, ಮೈಸೂರು | ಸದಸ್ಯರು |
| 16 | ಪೊಲೀಸ್ ಆಯುಕ್ತರು, ಮೈಸೂರು ನಗರ | ಸದಸ್ಯರು |
| 17 | ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು | ಸದಸ್ಯರು |
| 18 | ಕುಲಪತಿಗಳು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ | ಸದಸ್ಯರು |
| 19 | ಕುಲಪತಿಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು | ಸದಸ್ಯರು |
| 20 | ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಮೈಸೂರು | ಸದಸ್ಯರು |
| 21 | ಐ.ಎಂ.ಎ. ಪ್ರೆಸಿಡೆಂಟ್ (ಮೈಸೂರು ವಿಭಾಗ) | ಸದಸ್ಯರು |
| 22 | ಡೀನ್, ಮೈಸೂರು ಮೆಡಿಕಲ್ ಕಾಲೇಜು | ಸದಸ್ಯರು |
| 23 | ಅಧ್ಯಕ್ಷರು, ಹೆರಿಟೇಜ್ ಸಮಿತಿ, ಮೈಸೂರು | ಸದಸ್ಯರು |
| 24 | ಡಾ: ಚನ್ನಬಸಪ್ಪ, ನಿವೃತ್ತ ನಿರ್ದೇಶಕರು, ಮೈಸೂರು | ಸದಸ್ಯರು |
| 25 | ಡಾ: ಕೆ.ಆರ್. ಶ್ರೀಕಂಠಮೂರ್ತಿ, ನಿವೃತ್ತ ಪ್ರಾಂಶುಪಾಲರು, ಮೈಸೂರು | ಸದಸ್ಯರು |
| 26 | ಡಾ:ಕೆ.ವಿ ರಾಘವೇಂದ್ರರಾವ್, ನಿವೃತ್ತ ಪ್ರಾಧ್ಯಾಪಕರು, ಮೈಸೂರು | ಸದಸ್ಯರು |
| 27 | ಲೇ ಸೆಕ್ರೆಟರಿ, ಸರ್ಕಾರಿ ಆಯುರ್ವೇದ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ಮೈಸೂರು | ಸದಸ್ಯರು |
| 28 | ಡಾ: ಎಸ್.ಜಿ. ಮಂಗಲಗಿ, ಪ್ರಾಧ್ಯಾಪಕರು, ಸರ್ಕಾರಿ ಆಯುರ್ವೇದ ಕಾಲೇಜು, ಮೈಸೂರು | ಸಂಘಟನಾ ಕಾರ್ಯದರ್ಶಿ |
| 29 | ಪ್ರಾಚಾರ್ಯರು, ಸರ್ಕಾರಿ ಆಯುರ್ವೇದ ವೈದ್ಯಕೀಯ ಕಾಲೇಜು ಮೈಸೂರು | ಸದಸ್ಯ ಕಾರ್ಯದರ್ಶಿ |
| 30 | ಸಂಸ್ಥೆಯ ಹಳೆಯ ವಿದ್ಯಾರ್ಥಿಗಳ ಜಿಲ್ಲಾವಾರು ಪ್ರತಿನಿಧಿಗಳು | ಪ್ರಾಚಾರ್ಯರು ತೀರ್ಮಾನ ತೆಗೆದುಕೊಳ್ಳಬಹುದು. |

ಪಿ.ಆರ್.1157

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಗ್ರಾಮ ಸ್ವರಾಜ್ ಯೋಜನೆಯಡಿ 2007–08ನೇ ಸಾಲಿಗೆ ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ಗ್ರಾಮ ಪಂಚಾಯತಿಗಳಿಗೆ ಮೊದಲನೇ ಕಂತಿನ ಮುಕ್ತ ಅನುದಾನ (ಬ್ಲಾಕ್ ಅನುದಾನ) ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಚನ್ನಗಿರಿ ತಾಲ್ಲೂಕು ಪಂಚಾಯಿತಿ ಕಾರ್ಯ ನಿರ್ವಾಹಕ ಅಧಿಕಾರಿಗಳ ಪತ್ರ ಸಂಖ್ಯೆ: ಕಾನಿಅ/ತಾಪಂಚ/ಗ್ರಾ.ಸ್ವ/2007–08/282 ದಿನಾಂಕ:1–3–2008

**ಪ್ರಸ್ತಾವನೆ:**

ವಿಶ್ವ ಬ್ಯಾಂಕ್ ನೆರವಿನ ಗ್ರಾಮ, ಸ್ವರಾಜ್–ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆಯಡಿ ಗ್ರಾಮ ಪಂಚಾಯಿತಿಗಳಿಗೆ ಅವು ತಯಾರಿಸಿದ ಯೋಜನಾ ಅಭಿವೃದ್ಧಿ ವರದಿ 2006–12 ರ ಆಧಾರದ ಮೇಲೆ ಐದು ವರ್ಷದ ಅವಧಿಗೆ ಅನುದಾನವನ್ನು ಕಾರ್ಯಾಚರಣೆ ಕೈಪಿಡಿಯ ಮಾರ್ಗಸೂಚಿಗಳನ್ವಯ ಮುಕ್ತ ಅನುದಾನವನ್ನು ಬಿಡುಗಡೆ ಮಾಡಬೇಕಾಗಿದೆ. ಈಗಾಗಲೇ ಮಾರ್ಗಸೂಚಿಗಳನ್ವಯ 2006–07ನೇ ಸಾಲಿಗೆ ಅನುದಾನವನ್ನು ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲಾಗಿದೆ. ವಿಶ್ವಬ್ಯಾಂಕಿನ 2ನೇ ನಿಯೋಗವು ಒಪ್ಪಿದಂತೆ 2007–08ನೇ ಸಾಲಿನ ಅನುದಾನವನ್ನು ಶೇ. 50 ರಷ್ಟು ಅನುದಾನವನ್ನು 2006–07ನೇ ಸಾಲಿಗೆ ಬಿಡುಗಡೆ ಮಾಡಲಾದ ಅನುದಾನದಲ್ಲಿ ಶೇ 70 ರಷ್ಟು ಹಣಬಳಕೆ ಮಾಡಿದ ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲಾಗುವುದು. ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ 8 ಗ್ರಾಮಪಂಚಾಯಿತಿಗಳ 2006–07ನೇ ಸಾಲಿನ ಹಣ ಬಳಕೆ ಪ್ರಮಾಣ ಪತ್ರಗಳನ್ನು ಕಾರ್ಯನಿರ್ವಾಹಕ ಅಧಿಕಾರಿಗಳು ಚನ್ನಗಿರಿ ಇವರು ಮೇಲೆ ಓದಲಾದ ಪತ್ರದ ಮೂಲಕ ಕಳುಹಿಸಿದ್ದಾರೆ. ಅವುಗಳಲ್ಲಿ 8 ಗ್ರಾಮ ಪಂಚಾಯಿತಿಗಳು ಶೇ 70ಕ್ಕೂ ಹೆಚ್ಚು ಅನುದಾನವನ್ನು ಬಳಕೆ ಮಾಡಿವೆ. ಸದರಿ ಗ್ರಾಮ ಪಂಚಾಯಿತಿಗಳಿಗೆ 2007–08ನೇ ಸಾಲಿನ ಮೊದಲನೇ ಕಂತಿನ ಮುಕ್ತ ಅನುದಾನವನ್ನು ಬಿಡುಗಡೆ ಮಾಡಬಹುದಾಗಿದೆ. ಅದಕ್ಕಾಗಿ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 179 ಗ್ರಾಸ್ವಯೋ 2007, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2008**

ಮೇಲಿನ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ 8 ಗ್ರಾಮ ಪಂಚಾಯಿತಿಗಳಿಗೆ ಇದಕ್ಕೆ ಲಗತ್ತಿಸಿದ ಅನುಬಂಧದಲ್ಲಿ ತಿಳಿಸಿರುವಂತೆ ಒಟ್ಟು ರೂ. 26.99 ಲಕ್ಷಗಳನ್ನು (ರೂಪಾಯಿ ಇಪ್ಪತ್ತಾರು ಲಕ್ಷದ ತೊಂಬತ್ತೊಂಬತ್ತು ಸಾವಿರ ಮಾತ್ರ) ಬಿಡುಗಡೆ ಮಾಡಲು ಸರ್ಕಾರವು ಹರ್ಷಿಸುತ್ತದೆ. ಸದರಿ ಹಣವನ್ನು ಲೆಕ್ಕಶೀರ್ಷಿಕೆ 4515–00–103–3–00–132 (Capital Expenses)) ಕರ್ನಾಟಕ ಗ್ರಾಮೀಣ ಬಡತನ ಹಾಗೂ ಪಂಚಾಯಿತಿ ಯೋಜನೆಯಡಿಯಲ್ಲಿ (ಗ್ರಾಮ ಸ್ವರಾಜ್) ಪೇಯಿಸ್ ರಸೀದಿಯ ಮೇಲೆ ಸಂಗ್ರಹಣಾಧಿಕಾರಿಗಳು ಗ್ರಾಮ ಸ್ವರಾಜ್ ಯೋಜನೆಯಡಿ ಡ್ರಾ ಮಾಡಿ Syndicate Bank Canara Bank State, Bank of India, Indian Bank, Corporation Bank Bangalore ಇಲ್ಲಿ ತೆರೆದಿರುವ ಉಳಿತಾಯ ಖಾತೆಗೆ ಜಮೆ ಮಾಡಬೇಕು. ಸದರಿ ಬ್ಯಾಂಕಿನ ಮ್ಯಾನೇಜರವರು ಅನುಬಂಧದಲ್ಲಿ ತೋರಿಸಿರುವ ಬ್ಯಾಂಕುಗಳ ಸಂಬಂರ್ಧಪಟ್ಟ ಗ್ರಾಮ ಪಂಚಾಯಿತಿಗಳ ಗ್ರಾಮ ಸ್ವರಾಜ್ ಯೋಜನೆಯ ಖಾತೆಗಳಿಗೆ ವರ್ಗಾಯಿಸಲು ತಿಳಿಸಿದೆ.

**ಗ್ರಾಮ ಪಂಚಾಯಿತಿಗಳು ಈ ಅನುದಾನವನ್ನು ಕೆಳಕಂಡ ಷರತ್ತಿಗೊಳಪಟ್ಟು ವಿನಿಯೋಗಿಸತಕ್ಕದ್ದು.**

1. ಯೋಜನಾ ಕಾರ್ಯಾಚರಣೆ ಕೈಪಿಡಿಯ ಪ್ಯಾರಾ 14 ಹಾಗೂ ಅನುಬಂಧ 15 ರಲ್ಲಿ ತೆಗೆದುಕೊಳ್ಳಬಹುದಾದ ಕಾಮಗಾರಿಗಳಿಗೆ ಮಾತ್ರ ವೆಚ್ಚ ಭರಿಸತಕ್ಕದ್ದು.
2. ಆಡಳಿತ ವೆಚ್ಚ, ಧಾರ್ಮಿಕ ಕಟ್ಟಡಗಳು, ಸಮುದಾಯ ಭವನ, ಖಾಸಗಿ ಸಂಸ್ಥೆಗಳಿಗೆ ಸಹಾಯ ಇತ್ಯಾದಿಗಳಿಗೆ ವಿನಿಯೋಗಿಸತಕ್ಕದ್ದಲ್ಲ.
3. ಗ್ರಾಮ ಸಭೆಯಲ್ಲಿ ಅನುಮೋದಿತ 2007–08ನೇ ಸಾಲಿನ ವಾರ್ಷಿಕ ಕ್ರಿಯಾ ಯೋಜನೆಯಲ್ಲಿ ಅಳವಡಿಸಿರುವ ಅರ್ಹ ಕಾರ್ಮಗಾರಿಗಳ ಅನುಷ್ಠಾನಕ್ಕಾಗಿ ಮಾತ್ರ ಖರ್ಚು ಭರಿಸತಕ್ಕದ್ದು.
4. ಶೇ. 20 ರಷ್ಟು ಅನುದಾನವನ್ನು ಕಡ್ಡಾಯವಾಗಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡ ಸಮುದಾಯದ ಅಭಿವೃದ್ಧಿಗಾಗಿ ಕ್ರಿಯಾ ಯೋಜನೆಯಲ್ಲಿ ಅಳವಡಿಸಿ ಖರ್ಚು ಭರಿಸತಕ್ಕದ್ದು.
5. ಯೋಜನಾ ಸಂಗ್ರಹಣಾ ಕೈಪಿಯಲ್ಲಿ ತಿಳಿಸಿರುವಂತೆ ಸರಕು, ಕೆಲಸ ಮತ್ತು ಸೇವೆಗಳನ್ನು ನಿರ್ವಹಿಸತಕ್ಕದ್ದು.
6. ಕರ್ನಾಟಕ ಪಂಚಾಯತ್ ರಾಜ್ (ಗ್ರಾಮ ಪಂಚಾಯಿತಿಗಳ ಆಯವ್ಯಯ ಮತ್ತು ಲೆಕ್ಕ ಪತ್ರಗಳು) ನಿಯಮಗಳು 2006 ರ ಪ್ರಕಾರ ಖರ್ಚು ಭರಿಸತಕ್ಕದ್ದು.
7. ಪ್ರತಿ ತಿಂಗಳು ಮಾಸಿಕ ಪ್ರಗತಿ ವರದಿಗಳನ್ನು ಹಾಗೂ ತ್ರೈಮಾಸಿಕ ಹಣ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ ಆಇ 1038 ವೆಚ್ಚ–6/2007 ದಿನಾಂಕ:3/10/2007ರಲ್ಲಿ ಕಡತ ಸಂಖ್ಯೆ:ಗ್ರಾಅಪ 54 ಗ್ರಾಸ್ವಯೋ 2007ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬೂವನಹಳ್ಳಿ ನಾಗರಾಜ್**

ಸಹಾಯಕ ಅಭಿವೃದ್ಧಿ ಆಯುಕ್ತರು

ಹಾಗೂ ಸರ್ಕಾರದ ಪದನಿಮಿತ್ತ ಅಧೀನ ಕಾರ್ಯದರ್ಶಿಗಳು,

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

**ಅನುಬಂಧ**

**ಗ್ರಾಮ ಸ್ವರಾಜ್ ಯೋಜನೆಯಡಿ 2007–08ನೇ ಸಾಲಿಗೆ ಗ್ರಾಮ ಪಂಚಾಯತಿಗಳಿಗೆ ಮುಕ್ತ ಅನುದಾನ (ಬ್ಲಾಕ್ ಅನುದಾನ) ಬಿಡುಗಡೆ ಮಾಡಿದ ವಿವರ (ರೂ. ಲಕ್ಷಗಳಲ್ಲಿ) ಸರ್ಕಾರಿ ಆದೇಶ ಸಂಖ್ಯೆ:ಗ್ರಾಅಪ 179 ಗ್ರಾಸ್ವಯೋ 2007, ದಿನಾಂಕ: 11ನೇ ಮಾರ್ಚ್ 2008 ರ ಲಗತ್ತು**

**ಜಿಲ್ಲೆ: ದಾವಣಗೆರೆ** **ತಾಲ್ಲೂಕು: ಚನ್ನಗಿರಿ**

| ಕ್ರ. ಸಂ | ಗ್ರಾಮ ಪಂಚಾಯಿತಿ ಹೆಸರು | ಬ್ಯಾಂಕ್‌ನ ಹೆಸರು | ಬ್ಯಾಂಕ್ ಶಾಖೆಯ ಹೆಸರು | ಬ್ಯಾಂಕ್ ಖಾತೆ ಸಂಖ್ಯೆ | ನಿಗಧಿಪಡಿಸಿದ ಅನುದಾನ | ಬಿಡುಗಡೆ ಮಾಡಿದ ಒಂದನೇ ಕಂತಿನ ಅನುದಾನ |
|---|---|---|---|---|---|---|
| 1 | Thippagondanahalli | Canara Bank | Channagiri | 53761 | 7.08 | 3.54 |
| 2 | Santhebennur | Canara Bank | Santhebennur | 18184 | 8.49 | 4.24 |
| 3 | Kanivebilachi | State Bank of India | Punyasthala | 30126627378 | 6.29 | 3.14 |
| 4 | Chikkaganguru | Canara Bank | Hodigere | 6102 | 5.42 | 2.71 |
| 5 | Vaddanal | Indian Bank | Vaddanal | 572181030 | 6.24 | 3.12 |
| 6 | Nuggihalli | Syndicate Bank | Devarahalli | 577215 | 6.07 | 3.03 |
| 7 | Kaknuru | Syndicate Bank | Devarahalli | 220/45690 | 7.21 | 3.60 |
| 8 | Karekatte | Corporation Bank | THyavanige | 11126 | 7.22 | 3.61 |
| | ಬಿಡುಗಡೆ ಮಾಡಲಾಗಿರುವ ಒಟ್ಟು ಅನುದಾನ | | | | 54.02 | 26.99 |

**ಬೂವನಹಳ್ಳಿ ನಾಗರಾಜ್**
ಸಹಾಯಕ ಅಭಿವೃದ್ಧಿ ಆಯುಕ್ತರು
ಹಾಗೂ ಸರ್ಕಾರದ ಪದನಿಮಿತ್ತ ಅಧೀನ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

ಪಿ.ಆರ್. 490

**ಕಂದಾಯ ಸಚಿವಾಲಯ**

**ವಿಷಯ:** ಉತ್ತರ ಕನ್ನಡ ಜಿಲ್ಲೆಯ ಕುಮಟಾ ತಾಲ್ಲೂಕು, ಗೋಕರ್ಣ ಶ್ರೀ ಮಹಾಬಲೇಶ್ವರ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಶ್ರೀ ರಾಮಚಂದ್ರಾಪುರ ಮಠದ ಪೀಠಾಧಿಪತಿಗಳಿಗೆ ವಹಿಸಿಕೊಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸುಚನೆ ಸಂಖ್ಯೆ:ಕಂಇ 77 ಮುಸೇವಿ 2003 ದಿನಾಂಕ:30.4.2003
2. ಧಾರ್ಮಿಕ ದತ್ತಿ ಆಯುಕ್ತರವರ ಪತ್ರ ಸಂಖ್ಯೆ:ಏಕರೂಪ ಶಾಸನ/ಸಿಆರ್ 45/07–08 ದಿನಾಂಕ:14.5.2008 ಹಾಗೂ 21.6.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34,245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಸರ್ಕಾರವು ಪ್ರಕಟಿಸಿರುತ್ತದೆ.

ಉತ್ತರ ಕನ್ನಡ ಜಿಲ್ಲೆ, ಕುಮಟಾ ತಾಲ್ಲೂಕು, ಗೋಕರ್ಣ ಶ್ರೀ ಮಹಾಬಲೇಶ್ವರ ದೇವಸ್ಥಾನ ಮತ್ತು ಅದರ ಪರಿವಾರ ದೇವರುಗಳ ದೇವಾಲಯದ ಆಡಳಿತವನ್ನು ಪರಂಪರಾಗತವಾಗಿ ನಡೆದು ಬಂದ ಪದ್ಧತಿಯಂತೆ ಶ್ರೀ ರಾಮಚಂದ್ರಾಪುರದ ಪೀಠಾಧಿಪತಿಗಳ ಮಾರ್ಗದರ್ಶಿನ ಆದೇಶಗಳಿಗೆ ಅನುಗುಣವಾಗಿ ಕಾಲಾನುಕಾಲಕ್ಕೆ ನಡೆಸಲು ಹಾಗೂ ಶ್ರೀ ಕ್ಷೇತ್ರದ ಸರ್ವತೋಮುಖದ ಅಭಿವೃದ್ಧಿಗಾಗಿ ಸದರಿ ದೇವಸ್ಥಾನವನ್ನು ಶ್ರೀ ರಾಮಚಂದ್ರಾಪುರ ಮಠಕ್ಕೆ ವಹಿಸಿಕೊಡಲು ಶ್ರೀ ಕ್ಷೇತ್ರ ಗೋಕರ್ಣ ಉಪಾಧಿವಂತ ಮಂಡಳದ ಅಧ್ಯಕ್ಷರು ದಿನಾಂಕ:1.2.2008 ರ ಮನವಿಯಲ್ಲಿ ಕೋರಿರುತ್ತಾರೆ ಮತ್ತು ಶ್ರೀ ರಾಮಚಂದ್ರಾಪುರ ಮಠದ ಆಡಳಿತಾಧಿಕಾರಿಗಳು ಸಹ ದಿನಾಂಕ:12.4.2008 ಹಾಗೂ 8.5.2008ರಲ್ಲಿ ಮನವಿಗಳನ್ನು

ಸಲ್ಲಿಸಿ, ಸದರಿ, ದೇವಸ್ಥಾನದ ಆಡಳಿತ ನಿರ್ವಹಣೆಯನ್ನು ಶ್ರೀಮಠಕ್ಕೆ ಸಂಪೂರ್ಣವಾಗಿ ವಹಿಸಿಕೊಟ್ಟು ತನ್ಮೂಲಕ ಶ್ರೀ ಕ್ಷೇತ್ರ ಗೋರ್ಕಣದ ಸರ್ವತೋಮುಖ ಅಭಿವೃದ್ಧಿಗೆ ಶ್ರೀಮಠವು ಶ್ರಮಿಸಲು ಅನುವು ಮಾಡಿಕೊಡಲು ಕೋರಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರು ಈ ಬಗ್ಗೆ ಕುಮಟಾ ತಹಶೀಲ್ದಾರ್, ಕುಮಟಾ ಉಪವಿಭಾಗಾಧಿಕಾರಿಗಳು ಹಾಗೂ ಉತ್ತರ ಕನ್ನಡ ಜಿಲ್ಲಾಧಿಕಾರಿಗಳಿಂದ ವರದಿಗಳನ್ನು ಪಡೆದು ಸರ್ಕಾರಕ್ಕೆ ಪರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ದೇವಸ್ಥಾನವು ಉತ್ತರ ಕನ್ನಡ ಜಿಲ್ಲೆಯಲ್ಲಿದ್ದು, ಈ ಹಿಂದೆ ಈ ಪ್ರದೇಶದಲ್ಲಿನ ದೇವಸ್ಥಾನಗಳ ಆಡಳಿತವನ್ನು ಬಾಂಬೆ ಸಾರ್ವಜನಿಕ ಜಿಮ್ಮೆಗಳ ಕಾಯ್ದೆ 1950 ರನ್ವಯ ನಿರ್ವಹಿಸಲಾಗುತ್ತಿದ್ದು, ಈ ಕಾಯ್ದೆಯನ್ವಯ ಎಲ್ಲಾ ದೇವಸ್ಥಾನಗಳಿಗೆ ನೋಂದಣಿ ಮಾಡಿಸುವುದು ಕಡ್ಡಾಯವಾದ್ದರಿಂದ ಅದರಂತೆ ಶ್ರೀ ಮಹಾಬಲೇಶ್ವರ ದೇವಸ್ಥಾನವನ್ನು ಸಹ ನೋಂದಣಿ ಮಾಡಿರುವುದು ಕಂಡುಬರುತ್ತದೆ. ದಿನಾಂಕ:1.5.2003 ರಿಂದ ಜಾರಿಗೆ ಬಂದ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1997 ಸೆಕ್ಷನ್ 23 (ಇ) ರನ್ವಯ ಈ ಹಿಂದೆ ನೋಂದಣಿಯಾಗಿದ್ದ ಎಲ್ಲಾ ಸಂಸ್ಥೆಗಳನ್ನು ಅಧಿಸೂಚಿತ ಸಂಸ್ಥೆಗಳಲ್ಲಿ ಪ್ರಕಟಿಸಬೇಕೆಂದಿದ್ದದರಿಂದ ಶ್ರೀ ಮಹಾಬಲೇಶ್ವರ ದೇವಸ್ಥಾನವನ್ನು ಸಹ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಲಾಗಿರುತ್ತದೆ.

ಆದರೆ ಕಾಯ್ದೆಯ ಸೆಕ್ಷನ್ 1(4)(i)ರ ಪ್ರಕಾರ ಒಂದು ಮಠಕ್ಕೆ ಅಥವಾ ಅದಕ್ಕೆ ಸೇರಿದ ಒಂದು ದೇವಸ್ಥಾನಕ್ಕೆ ಈ ಕಾಯ್ದೆಯು ಅನ್ವಯಿಸತಕ್ಕದ್ದಲ್ಲ ಎಂದಿರುತ್ತದೆ. ಗೋರ್ಕರ್ಣ ಶ್ರೀ ಮಹಾಬಲೇಶ್ವರ ದೇವಸ್ಥಾನವು ಹಿಂದೆ ಶ್ರೀ ರಾಮಚಂದ್ರಾಪುರ ಮಠದ ಆಡಳಿತ ವ್ಯಾಪ್ತಿಗೆ ಒಳಪಟ್ಟ ಸಂಸ್ಥೆ ಎಂಬ ಮನವಿಯ ಹಿನ್ನಲೆಯಲ್ಲಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಕೈ ಬಿಡಬಹುದೆ ಎಂಬ ಬಗ್ಗೆ ರಾಜ್ಯದ ಅಡ್ವೋಕೇಟ್ ಜನರಲ್‌ರವರ ಅಭಿಪ್ರಾಯ ಪಡೆಯಲಾಗಿ, ಈ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಬಹುದೆಂದು ಅಭೀಪ್ರಾಯ ನೀಡಿರುತ್ತಾರೆ ಮತ್ತು ಕಾನೂನು ಇಲಾಖೆಯು ಸಹ ಅಡ್ವೋಕೇಟ್ ಜನರಲ್‌ರವರ ಅಭಿಪ್ರಾಯಕ್ಕೆ ಸಹಮತ ವ್ಯಕ್ತಪಡಿಸಿರುತ್ತದೆ.

ರಾಜ್ಯ ಅಡ್ವೋಕೇಟ್ ಜನರಲ್‌ರವರ ಅಭಿಪ್ರಾಯ ಹಾಗೂ ಕಾನೂನು ಇಲಾಖೆಯ ಅಭಿಪ್ರಾಯವನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 56 ಮುಆಬಿ 2008, ಬೆಂಗಳೂರು, ದಿನಾಂಕ:12ನೇ ಆಗಸ್ಟ್ 2008**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಸೆಕ್ಷನ್ 1(4)(i) ರ ಪ್ರಕಾರ "ಒಂದು ಮಠಕ್ಕೆ ಅಥವಾ ಅದಕ್ಕೆ ಸೇರಿದ ಒಂದು ದೇವಸ್ಥಾನಕ್ಕೆ ಈ ಕಾಯ್ದೆಯು ಅನ್ವಯಿಸತಕ್ಕದ್ದಲ್ಲ" ಎಂದಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 77 ಮುಸೇವಿ 2003 ದಿನಾಂಕ:30–4–2003ರಲ್ಲಿನ ಉತ್ತರ ಕನ್ನಡ ಜಿಲ್ಲೆ, ಕುಮಟಾ ತಾಲ್ಲೂಕಿನ ಅಧಿಸೂಚಿತ ಸಂಸ್ಥೆಗಳ ಪಟ್ಟಿಯ ಪುಟ ಸಂಖ್ಯೆ 734 ಕ್ರಮ ಸಂಖ್ಯೆ 92ರಲ್ಲಿನ ಉತ್ತರ ಕನ್ನಡ ಜಿಲ್ಲೆ ಕುಮಟಾ ತಾಲ್ಲೂಕು, ಗೋರ್ಕರ್ಣ ಶ್ರೀ ಮಹಾಬಲೇಶ್ವರ ದೇವಸ್ಥಾನ ಮತ್ತು ಅದರ ಪರಿವಾರ ದೇವರುಗಳ ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಸದರಿ ದೇವಸ್ಥಾನದ ಸಂಪೂರ್ಣ ಆಡಳಿತವನ್ನು ಶಿವಮೊಗ್ಗ ಜಿಲ್ಲೆ ಹೊಸನಗರ ಶ್ರೀ ರಾಮಚಂದ್ರಾಪುರ ಮಠಕ್ಕೆ ಹಸ್ತಾಂತರಿಸಲು ಉತ್ತರ ಕನ್ನಡ ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1194

**ಎಲ್.ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ

ಕಂದಾಯ ಇಲಾಖೆ (ಮುಜರಾಯಿ)

**ವಿಷಯ:** ಪ್ರವಾಹ ಪೀಡಿತ ಗ್ರಾಮಗಳನ್ನು ಸ್ಥಳಾಂತರಿಸಲು ಪ್ರಕೃತಿ ವಿಕೋಪ ಪರಿಹಾರನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು .

2 ಸರ್ಕಾರದ ಆದೇಶ ಸಂಖ್ಯೆ:ಆರ್.ಡಿ. 1 ಟಿಎಸ್‌ವೈ 2008 ದಿ:26.2.08

3 ಸರ್ಕಾರದ ಆದೇಶ ಸಂಖ್ಯೆ:ಆರ್ ಡಿ. 1 ಟಿಎಸ್‌ವೈ 2008 ದಿ:31.3.2008

4 ಸರ್ಕಾರದ ಆದೇಶ ಸಂಖ್ಯೆ:ಆರ್ ಡಿ 1 ಟಿಎಸ್‌ವೈ 2008(P) ದಿನಾಂಕ:22.4.2008

5 ಸರ್ಕಾರದ ಆದೇಶ ಸಂಖ್ಯೆ:ಆರ್ ಡಿ 1 ಟಿಎಸ್ ವೈ 2008(P) ದಿನಾಂಕ:16.8.2008

**ಪ್ರಸ್ತಾವನೆ:**

2007ನೇ ಸೆಪ್ಟೆಂಬರ್ ಮಾಹೆಯಲ್ಲಿ ಬಿದ್ದ ಭಾರಿ ಮಳೆಯಿಂದ ಬಾಗಲಕೋಟೆ, ಧಾರವಾಡ, ಗದಗ್, ಜಿಲ್ಲೆಗಳಲ್ಲಿ ಮೂವತ್ತು ಗ್ರಾಮಗಳು ಪ್ರವಾಹದಿಂದ ತೀವ್ರ ಹಾನಿಗೊಂಡಿದ್ದು, ಈ ಗ್ರಾಮಗಳನ್ನು ಹಂತ ಹಂತವಾಗಿ ಸ್ಥಳಾಂತರಿಸಲು ನಿರ್ಣಯಿಸಿ, ಒಂದನೇ ಹಂತದಲ್ಲಿ ಮೇಲೆ ಓದಲಾದ ಕ್ರಮಸಂಖ್ಯೆ (2)ರಲ್ಲಿನ ಆದೇಶದಂತೆ ಬಾಗಲಕೋಟೆ ಜಿಲ್ಲೆಗೆ ರೂ. 475.88 ಲಕ್ಷ ಅನುದಾನ ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ ಕ್ರಮಸಂಖ್ಯೆ (3)ರಲ್ಲಿನ ಆದೇಶದಂತೆ 2ನೇ ಹಂತದಲ್ಲಿ ಗದಗ್ ಜಿಲ್ಲೆಗೆ ಹೊಳೆಮಣ್ಣೂರು ಮತ್ತು ಕುರ್ಲಗೇರಿ ಗ್ರಾಮಗಳನ್ನು ಸ್ಥಳಾಂತರಿಸಲು ರೂ. 100.00ಲಕ್ಷ, ಮತ್ತು ಧಾರವಾಡ ಜಿಲ್ಲೆಗೆ ಅರಹಟ್ಟಿ ಮತ್ತು ಕೊಂಗವಾಡ ಗ್ರಾಮಗಳನ್ನು ಸ್ಥಳಾಂತರಿಸಲು 108ಲಕ್ಷ ರೂ.ಗಳ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಬಿಡುಗಡೆ ಮಾಡಲಾಗಿದೆ. ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬೆಳಗಾಂ ಜಿಲ್ಲೆಗೆ ಗ್ರಾಮಗಳ ಸ್ಥಳಾಂತರಕ್ಕೆ ಬಿಡುಗಡೆ ಮಾಡಿದ್ದ ಹಣದಲ್ಲಿ ಬೆಳಗಾಂ ಜಿಲ್ಲಾಧಿಕಾರಿಗಳ ಸಿ.ಆರ್.ಎಫ್ ಪಿಡಿ ಖಾತೆಯಲ್ಲಿ ಉಳಿಕೆಯಾಗಿದ್ದ ರೂ. 800.00 ಲಕ್ಷಗಳನ್ನು ಬೆಳಗಾಂ ಜಿಲ್ಲಾಧಿಕಾರಿಗಳ ಸಿಆರ್‌ಎಫ್ ಪಿ.ಡಿ. ಖಾತೆಯಿಂದ ಧಾರವಾಡ ಜಿಲ್ಲೆಯ ಜಿಲ್ಲಾಧಿಕಾರಿಗಳ ಸಿಆರ್‌ಎಫ್ ಪಿ.ಡಿ ಖಾತೆಗೆ ರೂ. 189.50 ಲಕ್ಷಗಳನ್ನು ಗ್ರಾಮಗಳ ಸ್ಥಳಾಂತರಕ್ಕೆ ಮತ್ತು ಗದಗ್ ಜಿಲ್ಲೆಯ ಜಿಲ್ಲಾಧಿಕಾರಿಗಳ ಸಿಆರ್ ಎಫ್ ಪಿಡಿ ಖಾತೆಗೆ ರೂ. 610.50 ಲಕ್ಷಗಳನ್ನು ವರ್ಗಾವಣೆ ಮಾಡಲು ಆದೇಶಿಸಲಾಗಿತ್ತು. ನಂತರ ಸರ್ಕಾರದ ಆದೇಶ ಸಂಖ್ಯೆ:ಕಂಇ 1 ಟಿಎಸ್ ವೈ 2008 (P) ದಿನಾಂಕ:16.8.2008 ರಲ್ಲಿ ಈ ಆದೇಶವನ್ನು (ಆದೇಶ ಸಂಖ್ಯೆ:ಕಂಇ 1 ಟಿಎಸ್‌ವೈ 2008(P) ದಿನಾಂಕ:22.4.2008) ಹಿಂಪಡೆದು ಈ ಹಣವನ್ನು ಬೆಳಗಾಂ ಜಿಲ್ಲಾಧಿಕಾರಿಗಳ ಸಿಆರ್ ಎಫ್ ಪಿಡಿ ಖಾತೆಯಲ್ಲಿಯೇ ಉಳಿಸಿದೆ. ಈ ಹಿನ್ನಲೆಯಲ್ಲಿ ಪ್ರವಾಹ ಪೀಡಿತ ಗ್ರಾಮಗಳನ್ನು ಸ್ಥಳಾಂತರಿಸಲು ಧಾರವಾಡ ಜಿಲ್ಲೆಗೆ ರೂ. 189.50 ಲಕ್ಷ ಹಾಗೂ ಗದಗ್ ಜಿಲ್ಲೆಗೆ ರೂ. 610.50 ಲಕ್ಷ ಬಿಡುಗಡೆ ಮಾಡುವ ಅವಶ್ಯಕತೆ ಇರುತ್ತದೆ. ಈ ಹಿನ್ನಲೆಯಲ್ಲಿ ಧಾರವಾಡ ಜಿಲ್ಲೆಯ ಅರಹಟ್ಟಿ ಗ್ರಾಮ, ಹಾಗೂ ಕೊಂಗವಾಡ ಗ್ರಾಮಗಳನ್ನು ಮತ್ತು ಗದಗ್ ಜಿಲ್ಲೆಯ ಹೊಳೆ ಮಣ್ಣೂರು ಮತ್ತು ಕುರ್ಲಗೇರಿ ಗ್ರಾಮಗಳನ್ನು ಸ್ಥಳಾಂತರಿಸಲು ಗದಗ್ ಹಾಗೂ ಧಾರವಾಡ ಜಿಲ್ಲೆಗೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ತೀರ್ಮಾನಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 1ಟಿ.ಎಸ್.ವೈ 2008 (P1), ಬೆಂಗಳೂರು, ದಿನಾಂಕ:16ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಧಾರವಾಡ ಜಿಲ್ಲೆಯಲ್ಲಿ ಅರಹಟ್ಟಿ ಮತ್ತು ಕೊಂಗವಾಡ ಗ್ರಾಮಗಳನ್ನು ಮತ್ತು ಗದಗ್ ಜಿಲ್ಲೆಯಲ್ಲಿ ಹೊಳೆಮಣ್ಣೂರು ಮತ್ತು ಕುರ್ಲಗೇರಿ ಗ್ರಾಮಗಳನ್ನು ಸ್ಥಳಾಂತರಿಸಲು ಕೆಳಕಂಡಂತೆ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1 | ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ (ಅರಹಟ್ಟಿ ಮತ್ತು ಕೊಂಗವಾಡ ಗ್ರಾಮಗಳನ್ನು ಸ್ಥಳಾಂತರಿಸಲು) | ರೂ. 189.50 ಲಕ್ಷ |
| 2 | ಜಿಲ್ಲಾಧಿಕಾರಿಗಳು, ಗದಗ್ ಜಿಲ್ಲೆ (ಹೊಳೆಮಣ್ಣೂರು ಮತ್ತು ಕುರ್ಲಗೇರಿ ಗ್ರಾಮಗಳನ್ನು ಸ್ಥಳಾಂತರಿಸಲು) | ರೂ. 610.50 ಲಕ್ಷ |
| | **ಒಟ್ಟು** | ರೂ. 800.00 ಲಕ್ಷ |

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2245–01–102–0–00–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್.ಡಿ 955 ವೆಚ್ಚ–7/08, ದಿನಾಂಕ:1.8.2008ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1195

**ಎಂ.ಎಸ್. ದೇಸಾಯಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು ಮತ್ತು ವಿಪತ್ತು ನಿರ್ವಹಣೆ)

**ಸಹಕಾರ ಸಚಿವಾಲಯ**

**ವಿಷಯ:** ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕ್ ನಿ. ವಿಜಾಪುರ ಇದರ ಆಡಳಿತಗಾರರ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಯುಬಿಸಿ–1:117/ಎಸ್ಎಸ್ಎನ್/2006–07 ದಿನಾಂಕ:23.1.2007,27.8.2007,ಮತ್ತು 2.2.2008

2 ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ ಯುಬಿಸಿ–1:117/ಎಸ್ಎಸ್ಎನ್/2006–07 ದಿನಾಂಕ:3.7.2008

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ:23.1.2007ರ ಆದೇಶದಲ್ಲಿ ಸಹಕಾರ ಸಂಘಗಳ ನಿಬಂಧಕರು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30(1)ರಡಿ ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕ್‌ನ ಆಡಳಿತ ಮಂಡಳಿಯನ್ನು ರದ್ದುಗೊಳಿಸಿ ಆಡಳಿತಗಾರರನ್ನು ನೇಮಿಸಿದ್ದಾರೆ. ತದನಂತರ ಆಡಳಿತಗಾರರ ಅವಧಿಯನ್ನು ಕಾಳಕಾಲಕ್ಕೆ ವಿಸ್ತಿರಿಸಿದ್ದು ದಿನಾಂಕ:30.4.2008 ರಂದು ಕೊನೆಗೊಂಡಿರುತ್ತದೆ. ಸದರಿ ಅವಧಿಯಲ್ಲಿ ಬ್ಯಾಂಕು ತನ್ನ ಸದಸ್ಯರಿಗೆ ಈ ಮೊದಲು ನೀಡಿದ್ದ ಗುರುತಿನ ಚೀಟಿಯನ್ನು ರದ್ದುಪಡಿಸಿ Biometric, P.V.C. card with Bar code Paper card with Hologram ಇವುಗಳಲ್ಲಿ ಯಾವುದಾದರೂ ಒಂದರಲ್ಲಿ ಹೊಸ ಗುರುತಿನ ಚೀಟಿಯನ್ನು ತಯಾರಿಸಿ ಆ ಆಧಾರದ ಮೇಲೆ ಬ್ಯಾಂಕಿನ ಆಡಳಿತ ಮಂಡಳಿಗೆ ಚುನಾವಣೆ ನಡೆಸುವ ಕಾರ್ಯದಲ್ಲಿ ಪ್ರವೃತ್ತರಾಗಿದ್ದಾಗ ವಿಧಾನಸಭಾ ಚುನಾವಣೆ ಜರುಗಿದ ನಿಮಿತ್ತ ಗುರುತಿನ ಚೀಟಿ ವಿತರಿಸಲು ಸಾಧ್ಯವಾಗದ ಕಾರಣ ನಿಗದಿತ ಅವಧಿಯಲ್ಲಿ ಚುನಾವಣೆ ನಡೆಸಲು ಸಾಧ್ಯವಾಗಿಲ್ಲ ಎಂದು ತಿಳಿಸಿ ಆಡಳಿತಗಾರರ ಅವಧಿಯನ್ನು ಆರು ತಿಂಗಳ ಅವಧಿಗೆ ವಿಸ್ತರಿಸಲು ಕೋರಿರುತ್ತದೆ. ಸದರಿ ಆಡಳಿತಗಾರರ ಅವಧಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ದಿನಾಂಕ:24.7.2008 ರಿಂದ 23.1.2009ರವರೆಗೆ ಆರು ತಿಂಗಳವರೆಗೆ ವಿಸ್ತರಿಸಬಹುದೆಂದು ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಓ 133 ಸಿಎಲ್ಎಂ 2008 ಬೆಂಗಳೂರು ದಿನಾಂಕ:14ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನಲೆಯಲ್ಲಿ ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕಿನ ಆಡಳಿತಗಾರರ ಅವಧಿಯನ್ನು ದಿನಾಂಕ:24.7.2008 ರಿಂದ 23.1.2009ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕ್ ಲಿ., ವಿಜಾಪುರ ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ. ಎಂದರೆ:

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30 ಉಪಪ್ರಕರಣ (1)ರಲ್ಲಿನ "ಒಂದು ವರ್ಷ" ಎಂಬ ಪದಗಳಿಗೆ ಬದಲಾಗಿ "ಹದಿನೆಂಟು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಸೂಚನೆ: 2) ಪ್ರಕರಣ 30 ಉಪ–ಪ್ರಕರಣ (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:23.1.2009 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 30 ಉಪ–ಪ್ರಕರಣ (1)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1196

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ:** ಸಮಗ್ರ ಶಿಶು ಅಭಿವೃದ್ಧಿ ಯೋಜನೆ, ಹೊಸನಗರ, ಶಿವಮೊಗ್ಗ ಜಿಲ್ಲೆ ಇಲ್ಲಿ ಆಹಾರ ಪದಾರ್ಥಗಳ ಹಾಗೂ ಸರ್ಕಾರದ ಹಣವನ್ನು ದುರುಪಯೋಗ ಪಡಿಸಿಕೊಂಡಿರುವ ಕುರಿತು–ಶಿಸ್ತು ಕ್ರಮದ ಬಗ್ಗೆ ಆದೇಶ.

**ಓದಲಾಗಿದೆ:** 1. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ನಿಸಿಶಿಅ/13/2000–01 ದಿ:16–8–2002 (ಪ್ರಕರಣದ ಬಗ್ಗೆ ವರದಿ)

2 ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ:ಮಮಇ /254/ಎಸ್‌ಜೆಡಿ /02 ದಿ:29–11–02

3 ಸರ್ಕಾರಿ ಆದೇಶ ಸಂಖ್ಯೆ:ಮಮಇ/254/ಎಸ್ ಜೆಡಿ/02 ದಿ:16.11.2004 (ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳ ನೇಮಕ.

4 ವಿಚಾರಣಾಧಿಕಾರಿಗಳ ವರದಿ ದಿ:9–4–2007

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಸಹಾಯಕ ಶಿಶೂ ಅಭಿವೃದ್ಧಿ ಯೋಜನಾಧಿಕಾರಿ, ಹೊಸನಗರ, ಶಿವಮೊಗ್ಗ ಜಿಲ್ಲೆ ಇಲ್ಲಿ ಆಹಾರ ಪದಾರ್ಥಗಳ ದುರುಪಯೋಗ ಮತ್ತು ಹಣಕಾಸಿನ ಅಸಮರ್ಪಕ ನಿರ್ವಹಣೆಗೆ ಕಛೇರಿಯ ಶ್ರೀ ಶಿವಪ್ರಸಾದ್, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಹಾಗೂ ಶ್ರೀ ಗಣೇಶ್ ರಾವ್, ಪ್ರದಸ , ಇವರುಗಳು ಸಾಮೂಹಿಕವಾಗಿ ಹೊಣೆಗಾರರಾಗಿದ್ದು, ಸದರಿ ಅಧಿಕಾರಿ/ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಆರೋಪಣಾ ಪಟ್ಟಿಗಳೊಂದಿಗೆ ಮುಖ್ಯ ಕಾರ್ಯನಿರ್ವಣಾಧಿಕಾರಿಗಳು, ಜಿಲ್ಲಾ ಪಂಚಾಯತಿ ಶಿವಮೊಗ್ಗ ಇವರು ಕೋರಿದ ಮೇರೆಗೆ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ಆಪಾದಿತ ಅಧಿಕಾರಿ/ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ. ಅದರಂತೆ ಸರ್ಕಾರವು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಈ ಮೂವರಿಗೂ ಆರೋಪಣಾ ಪಟ್ಟಿಗಳೊಂದಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿದೆ, ಆಪಾದಿತರ ತಮ್ಮ ಹೇಳಿಕೆಯಲ್ಲಿ ಆಪಾದನೆಗಳನ್ನು ಅಲ್ಲಗಳೆದಿರುವುದರಿಂದ ಇವರುಗಳ ವಿರುದ್ಧ ಜಂಟಿ ಇಲಾಖಾ ತನಿಖೆ ನಡೆಸಲು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯವರನ್ನು ನೇಮಿಸಿ ಆದೇಶಿಸಿದೆ.

ಮೇಲಿನ ಕ್ರಮ ಸಂಖ್ಯೆ (4)ರಲ್ಲಿ ವಿಚಾರಣಾಧಿಕಾರಿಗಳು, ಈ ಬಗ್ಗೆ ವಿಚಾರಣೆಯನ್ನು ನಡೆಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿದ್ದು, ವಿಚಾರಣಾ ವರದಿಯಲ್ಲಿನ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡಂತೆ ದಂಡನೆ ವಿಧಿಸಲು ಸರ್ಕಾರವು ನಿರ್ಧರಿಸಿದೆ.

(1) ಮೊದಲನೆಯ ಆರೋಪಿ ಶ್ರೀ ಶಿವಪ್ರಸಾದ್, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು (ನಿವೃತ್ತ) ಹೊಸನಗರ, ಇವರ ವಿರುದ್ಧ ಹೊರಿಸಲಾಗಿದ್ದ ಎರಡು ಆರೋಪಗಳ ಪೈಕಿ ಯಾವುದೊಂದು ಆರೋಪವು ರುಜುವಾತು ಆಗಿರುವುದಿಲ್ಲ. ಆದುದರಿಂದ ಇವರ ವಿರುದ್ಧ ದೋಷಾರೋಪಣೆಗಳನ್ನು ಕೈಬಿಟ್ಟು ಅವರನ್ನು ದೋಷಮುಕ್ತಗೊಳಿಸಲು ತೀರ್ಮಾನಿಸಿದೆ.

(2) ಎರಡನೆಯ ಆರೋಪಿ ಶ್ರೀ ಲೋಕೇಶಪ್ಪ, ಸಹಾಯಕ ಬಾಲವಿಕಾಸ ಯೋಜನಾಧಿಕಾರಿ ಇವರು ವಿರುದ್ಧ ಇರುವ ಎರಡು ಆರೋಪಗಳ ಪೈಕಿ 2ನೇ ಆರೋಪವು ಭಾಗಶಃ ರುಜುವಾತು ಆಗಿರುವುದರಿಂದ ಇವರ ಕರ್ತವ್ಯ ನಿರ್ಲಕ್ಷತೆಯನ್ನು ಪರಿಗಣಿಸಿ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವ ದಂಡನೆ ವಿಧಿಸಲು ಉದ್ದೇಶಿಸಿದೆ.

(3) ಮೂರನೇ ಆರೋಪಿ ಶ್ರೀ ಗಣೇಶ್ ರಾವ್, ಪ್ರಥಮ ದರ್ಜೆ ಸಹಾಯಕರು, ಇವರ ವಿರುದ್ಧ 2 ಆರೋಪಗಳಿದ್ದ 2ನೇ ಆರೋಪವು ಸಂಪೂರ್ಣ ಸಾಬೀತಾಗಿರುವುದರಿಂದ ಇವರ ಎರಡು ವಾರ್ಷಿಕ ವೇತನ ಮುಂಬಡ್ತಿಗಳನ್ನು ಸಂಚಿತಪರಿಣಾಮ ರಹಿತವಾಗಿ ತಡೆಹಿಡಿಯುವದರ ಜೊತೆಗೆ ಅವರಿಂದ ಸರ್ಕಾರಕ್ಕೆ ನಷ್ಟವಾಗಿರುವ ರೂ. 26242/– ಗಳನ್ನು ಅವರ ವೇತನದಲ್ಲಿ ಅವರ ನಿವೃತ್ತಿ ದಿನಾಂಕವನ್ನು ಗಮನದಲ್ಲಿಟ್ಟು ಸಂಬಂದಿಸಿದ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಸೂಕ್ತ ಕಂತುಗಳಲ್ಲಿ ವಸೂಲಿ ಮಾಡುವ ದಂಡನೆ ವಿಧಿಸಲು ನಿರ್ಧರಿಸಿದೆ.

ತನಿಖಾ ವರದಿಯನ್ನು ಪರಿಶೀಲಿಸಿದ ನಂತರ ವರದಿಯಲ್ಲಿರುವ ಶಿಫಾರಸ್ಸುಗಳ ಅನ್ವಯ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಮಇ 254 ಎಸ್ ಜೆಡಿ 2002 ಬೆಂಗಳೂರು, ದಿನಾಂಕ:8ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶಿಶು ಅಭಿವೃದ್ಧಿ ಯೋಜನೆ ಹೊಸನಗರ, ಇಲ್ಲಿನ ಆಹಾರ ಪದಾರ್ಥಗಳ ಹಾಗೂ ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿರುವ ಆಪಾದನೆ ಮೇಲೆ ಜಂಟಿ ವಿಚಾರಣೆ ನಡೆಸಿದ್ದು, ವಿಚಾರಣಾ ವರದಿಯನ್ನಾಧರಿಸಿ ಕರ್ನಾಟಕ ನಾಗರಿಕ ಸೇವಾ ನಿಯಮಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳಿಗೂ 1957ರ ನಿಯಮ 8(iii) ರನ್ವಯ ಈ ಕೆಳಕಂಡಂತೆ ದಂಡನೆ ವಿಧಿಸಿ ಆದೇಶಿಸಿದೆ.

(1) ಶ್ರೀ ಶಿವಪ್ರಸಾದ್, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು (ನಿವೃತ್ತ), ಹೊಸನಗರ, ಶಿವಮೊಗ್ಗ, ಜಿಲ್ಲೆ ಇವರ ವಿರುದ್ಧ ಮಾಡಲಾದ ಆರೋಪಗಳಲ್ಲಿ ಯಾವುದೊಂದು ಸಾಬೀತಾಗಿಲ್ಲದ ಕಾರಣ ಇವರ ವಿರುದ್ಧದ ದೋಷಾರೋಪಣೆಗಳನ್ನು ಕೈಬಿಟ್ಟು, ಅವರನ್ನು ದೋಷಮುಕ್ತಗೊಳಿಸಲಾಗಿದೆ.

(2) ಎರಡನೆಯ ಆರೋಪಿ ಶ್ರೀ ಲೋಕೇಶಪ್ಪ, ಸಹಾಯಕ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಹೊಸನಗರ ಇವರ ವಿರುದ್ಧ ಹೊರಿಸಲಾಗಿದ್ದ ಎರಡು ಆರೋಪಗಳ ಪೈಕಿ 2ನೇ ಆರೋಪವು ಭಾಗಶಃ ರುಜುವಾತು ಆಗಿರುವುದರಿಂದ ಇವರ ಕರ್ತವ್ಯ ನಿರ್ಲಕ್ಷತೆಯನ್ನು ಪರಿಗಣಿಸಿ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವ ದಂಡನೆ ವಿಧಿಸಲಾಗಿದೆ.

(3) ಮೂರನೇ ಆರೋಪಿ ಶ್ರೀ ಗಣೇಶರಾವ್, ಪ್ರದಸ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿ, ಹೊಸನಗರ, ಶಿವಮೊಗ್ಗ ಜಿಲ್ಲೆ ಇವರ ವಿರುದ್ಧ ಹೊರಿಸಲಾಗಿದ್ದ ಎರಡು ಆರೋಪಗಳ ಪೈಕಿ 2ನೇ ಆರೋಪವು ಸಂಪೂರ್ಣ ಸಾಬೀತಾಗಿರುವುದರಿಂದ ಇವರ ಎರಡು ವಾರ್ಷಿಕ ವೇತನ ಮುಂಬಡ್ತಿಗಳನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವುದರ ಜೊತೆಗೆ ನಿಯಮ 8(iv) ರನ್ವಯ ಇವರಿಂದ ಸರ್ಕಾರಕ್ಕೆ ನಷ್ಟವಾಗಿರುವ ರೂ. 26242/–ಗಳನ್ನು ಅವರ ವೇತನದಲ್ಲಿ ಅವರ ನಿವೃತ್ತಿ ದಿನಾಂಕವನ್ನು ಗಮನದಲ್ಲಿಟ್ಟುಕೊಂಡು ಸಂಬಂಧಿತ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ಸೂಕ್ತ ಕಂತುಗಳಲ್ಲಿ ವಸೂಲಿ ಮಾಡುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1199

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಡಾ: ಬಿ.ಎಸ್. ನಟರಾಜ್, ನಿವೃತ್ತ ನಿರ್ದೇಶಕರು, ಆಯುಷ್ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣಾಧಿಕಾರಿಯಾಗಿ ನೇಮಿಸಿದ್ದ ಶ್ರೀ ಟಿ. ಸಂತಾನಂ ನಿವೃತ್ತ ಜಿಲ್ಲಾ ನ್ಯಾಯಾಧೀಶರ ಬದಲಿಗೆ ಬೇರೆ ವಿಚಾರಣಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಡಾ:ಬಿ.ಎಸ್. ನಟರಾಜ್ ನಿವೃತ್ತ ನಿರ್ದೇಶಕರು, ಆಯುಷ್ ಇಲಾಖೆ ಇವರ ದಿನಾಂಕ: 18–7–2007ರ ಉತ್ತರ

2 ಸಮಸಂಖ್ಯೆ ಸರ್ಕಾರಿ ಆದೇಶ ದಿನಾಂಕ:19–9–2007.

**ಪ್ರಸ್ತಾವನೆ:**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ನಿಯಮ ಬಾಹಿರವಾಗಿ ವೃತ್ತಿ ತಜ್ಞತೆ ಮತ್ತು ಕೌಶಲ್ಯತೆ ವಿರುದ್ಧವಾಗಿ ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆಯಲ್ಲಿ ಔಷಧಿ ವಿತರಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ಜಿಯಾವುಲ್ಲಾಖಾನ್ ಅವರನ್ನು ಸರ್ಕಾರಿ ಆಯುರ್ವೇದ ಔಷದಾಲಯ ಮಾದೇನಹಳ್ಳಿಯಲ್ಲಿ ಔಷಧ ವಿರತಕರಾಗಿ ಕೆಲಸ ಮಾಡುತ್ತಿದ್ದ ಶ್ರೀ ಆಂಜನಪ್ಪರವರ ಜಾಗಕ್ಕೆ ಪರಸ್ಪರ ವರ್ಗಾವಣೆ ಮಾಡಿದ, ಹಾಗೂ ಗುಲ್ಬಗಾದ ಆಯುಷ್ಯ ಕಛೇರಿಯಲ್ಲಿ ಸ್ಟೆನೋಗ್ರಾಫರ್ ಆಗಿದ್ದ ಶ್ರೀಮತಿ ಜಿ. ವರಲಕ್ಷ್ಮಿ ಎಂಬ ಪರಿಶಿಷ್ಟ ಜಾತಿಗೆ ಸೇರಿದ ಮಹಿಳೆಯು ಮಾರ್ಚ 2000ರಲ್ಲಿ ಪದೋನ್ನತಿಗಾಗಿ ಅರ್ಜಿ ಸಲ್ಲಿಸಿದ್ದರೂ 5 ವರ್ಷಗಳ ಸೇವೆ ಮುಗಿದ ತಕ್ಷಣ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ವೃಂದ ಬದಲಾವಣೆಗೆ ಅವಕಾಶವಿದ್ದರೂ ಅವರ ಅರ್ಜಿಯನ್ನು ಪರಿಗಣಿಸದೇ ಉಳಿದ, ಶ್ರೀ ಬಿ.ಎಂ. ಕೊಟಗಿ ಸ್ಟೆನೋಗ್ರಾಫರ್ ಇವರಿಗೆ ಅವರು ಅರ್ಜಿ ಸಲ್ಲಿಸಿದ 24 ಗಂಟೆ ಒಳಗೆ ಪ್ರಥಮ ದರ್ಜೆ ಸಹಾಯಕರಾಗಿ ವೃಂದ ಬಲಾವಣೆ ನೀಡಿ ಅಧೀಕ್ಷಕರ ಹುದ್ದೆಯ ಪ್ರಥಮ ಬಿಂದುವನ್ನು ಪರಿಶೀಷ್ಟ ಜಾತಿಗೆ ನೀಡಿಬೇಕಿದ್ದರೂ ಪರಿಗಣಿಸದೆ ದುರ್ನಡತೆ ಎಸಗಿದ 9 ಅಧೀಕ್ಷಕರುಗಳಿಗೆ 6 ಪ್ರಥಮ ದರ್ಜೆ ಸಹಾಯಕರಿಗೆ 4 ದ್ವಿತೀಯ ದರ್ಜೆ ಸಹಾಯಕರಿಗೆ 5 ಹಿರಿಯ ಬೆರಳಚ್ಚುಗಾರರಿಗೆ ಆರ್ಥಿಕ ಮಿತಿ ನ್ಯಾಯ ಕ್ರಮಗಳ ಪಾಲನೆಗೆ ಹೊರಡಿಸಿದ ಸರ್ಕಾರ ಆದೇಶ ಸಂಖ್ಯೆ ಆಇ 3 ಬಿಇಎಂ 2001, ದಿನಾಂಕ17.10.2007ನ್ನು ಉಲ್ಲಂಘಿಸಿ ವಿವಿಧ ವೃಂದಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿ ಹೊರಡಿಸಿ ಅಂತಿಮ ಜೇಷ್ಠತಾ ಪಟ್ಟಿಯನ್ನು ಹೊರಡಿಸುವ ಮೊದಲೇ ಇವರುಗಳಿಗೆ ನ್ಯಾಯಾಲಯದ ತೀರ್ಪಿನ ವಿರುದ್ಧವಾಗಿ ಪದೋನ್ನತಿ ನೀಡಿದ ದ್ರವ್ಯಗುಣ ಸ್ನಾತಕೋತ್ತರ ಕೋರ್ಸಿಗೆ ಆಯ್ಕೆ ಹೊಂದಿ ಸರ್ಕಾರಿ ಆರ್ಯುವೇದ ವೈದ್ಯಕೀಯ ಮಹಾ ವಿದ್ಯಾಲಯ, ಬೆಂಗಳೂರು ಇಲ್ಲಿ ಪ್ರವೇಶ ಹೊಂದಿದ ಡಾ: ಶಶಿರೇಖಾ, ಇವರನ್ನು ನಿಯಮ ಉಲ್ಲಂಘಿಸಿ ಪರಸ್ಪರ ವರ್ಗಾವಣೆ ಮಾಡಿದ ಹಾಗೂ ಟೆಂಡರ್ ನಿಷ್ಕರ್ಷೆಗೊಳಿಸುವ ಸಮಿತಿಯ ಕಾರ್ಯದರ್ಶಿಯಾಗಿಯೂ ನಂತರ ಅಧ್ಯಕ್ಷರಾಗಿ ಟೆಂಡರ್ ನಿಯಮಗಳನ್ನು ಮತ್ತು ಪಾರದರ್ಶಕ ಅಧಿನಿಯಮಗಳನ್ನು

ಉಲ್ಲಂಘಿಸಿರುವ ಆರೋಪಗಳಿಗಾಗಿ ಡಾ: ಬಿ.ಎಸ್. ನಟರಾಜ್, ನಿವೃತ್ತ ನಿರ್ದೇಶಕರು ಆಯುಷ್ ಇಲಾಖೆ ಅವರ ವಿರುದ್ಧ ಮೇಲೆ (2)ರಲ್ಲಿ ಓದಲಾದ ದಿ:19.9.2007ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಟಿ. ಸಂತಾನಂ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿತ್ತು. ಆದರೆ ಅವರಿಗೆ ಕಳುಹಿಸಿದ್ದ ಸರ್ಕಾರಿ ಆದೇಶ ಹಾಗೂ ಪತ್ರಗಳು "RETURN TO SENDER AS THE ADDRESSEE IS DEAD" ಎಂಬ ಅಂಚೆ ಷರಾದೊಂದಿಗೆ ವಾಪಸ್ಸು ಬಂದಿರುತ್ತದೆ. ಆದುದರಿಂದ ವಿಚಾರಣೆಯನ್ನು ನಡೆಸಲು ಬೇರೆ ವಿಚಾರಣಾಧಿಕಾರಿಯನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 54 ಎಸ್ ಇಎನ್ 2006, ಬೆಂಗಳೂರು, ದಿನಾಂಕ:7ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮ 214 ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಮೇಲೆ (2) ರಲ್ಲಿ ಓದಲಾದ ದಿನಾಂಕ:19.9.2007ರ ಸರ್ಕಾರಿ ಆದೇಶವನ್ನು ಮಾರ್ಪಡಿಸಿ ಶ್ರೀ ಎಂ. ಜಿ. ಹಿರೇಮಠ ನಿವೃತ್ತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿರುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 22 ಸೇಇವಿ 2007, ದಿನಾಂಕ:11–4–2008 ರಂತೆ ರೂ. 8,000–00 (ಎಂಟು ಸಾವಿರ ರೂಪಾಯಿಗಳು ಮಾತ್ರ) ಗೌರವ ಧನ ಹಾಗೂ ರೂ 2000–00 (ಎರಡು ಸಾವಿರ ರೂಪಾಯಿಗಳು ಮಾತ್ರ) ಗಳ ವಾಹನ ಭತ್ಯೆಯನ್ನು ಪಡೆಯುತ್ತಾರೆ. ಉಳಿದಂತೆ ಆಡಳಿತಾಧಿಕಾರಿ ಭಾತರೀಯ ವೈದ್ಯ ಪದ್ಧತಿ (ಆಯುಷ್)ಗಳು ಮತ್ತು ಹೋಮಿಯೋಪತಿ ನಿರ್ದೇಶನಾಲಯ ಬೆಂಗಳೂರು, ಇವರೇ ಮಂಡನಾಧಿಕಾರಿಗಳಾಗಿ ಮುಂದುವರೆಯುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗೆ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು. ವಿಚಾರಣೆಗೆ ಸೂಕ್ತ ಸ್ಥಳವಕಾಶ ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ನಿರ್ದೇಶಕರು, ಭಾರತೀಯ ವೈದ್ಯಪದ್ಧತಿ ಹಾಗೂ ಹೋಮಿಯೋಪತಿ ನಿರ್ದೇಶನಾಲಯ, ಬೆಂಗಳೂರು ಇವರು ಕ್ರಮ ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1200

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ತಿದ್ದೋಲೆ**

**ಸಂಖ್ಯೆ:ಸಿಆಸುಇ 267 ಸಅಸೇ 2008, ಬೆಂಗಳೂರು, ದಿನಾಂಕ:29ನೇ ಜುಲೈ 2008**

ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 267 ಸಅಸೇ 2008 ದಿನಾಂಕ:9–7–2008 ರಲ್ಲಿನ ಆದೇಶ ಭಾಗದಲ್ಲಿ ನಮೂದಿಸಲಾದ ಹುದ್ದೆಗಳನ್ನು ದಿನಾಂಕ:9–7–2008 ರಿಂದಲೇ ಜಾರಿಗೆ ಬರುವಂತೆ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| | | |
|---|---|---|
| 1 | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ | 1 ಹುದ್ದೆ |
| 2 | ವಿಶೇಷ ಕರ್ತವ್ಯಾಧಿಕಾರಿ (ವೇತನ ಶ್ರೇಣಿ ರಹಿತ) | 1 ಹುದ್ದೆ |
| 3 | ಉಪ ಕಾರ್ಯದರ್ಶಿ | 1 ಹುದ್ದೆ |
| 4 | ಆರ್ಥಿಕ ಸಲಹೆಗಾರರು (ವೇತನ ಶ್ರೇಣಿ ರಹಿತ) | 1 ಹುದ್ದೆ |
| 5 | ಅಧೀನ ಕಾರ್ಯದರ್ಶಿ /ಶಾಖಾಧಿಕಾರಿ | 1 ಹುದ್ದೆ |
| 6 | ಶಾಖಾಧಿಕಾರಿ | 1 ಹುದ್ದೆ |
| 7 | ಪತ್ರಾಂಕಿತ ಆಪ್ತ ಸಹಾಯಕರು | 1 ಹುದ್ದೆ |
| 8 | ಹಿರಿಯ ಸಹಾಯಕರು/ಶೀಘ್ರಲಿಪಿಗಾರರು | 3 ಹುದ್ದೆಗಳು |
| 9 | ಕಿರಿಯ ಸಹಾಯಕರು | 1 ಹುದ್ದೆ |
| 10 | ದಲಾಯತ್ | 3 ಹುದ್ದೆಗಳು |
| 11 | ಚಾಲಕರು | 2 ಹುದ್ದೆಗಳು |
| | **ಒಟ್ಟು** | 16 ಹುದ್ದೆಗಳು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1202

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯಕ್ಕೆ ಗ್ರೂಪ್–ಎ ಮತ್ತು ಬಿ ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸುವ ಬಗ್ಗೆ.

**ಪ್ರಸ್ತಾವನೆ:**

ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಒಂದು ಗ್ರೂಪ್–ಎ ಮತ್ತು ಒಂದು ಗ್ರೂಪ್–ಬಿ ವೃಂದದ ಹುದ್ದೆಗಳು ಅವಶ್ಯಕವಾಗಿರುವುದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 535 ಸಅಸೇ 2008 ಬೆಂಗಳೂರು, ದಿನಾಂಕ:7ನೇ ಆಗಸ್ಟ್ 2008**

ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯಕ್ಕೆ ಈ ಕೆಳಕಂಡ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮಾನ್ಯ ಮುಖ್ಯಮಂತ್ರಿಯವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ಸೃಜಿಸಲಾಗಿದೆ.

| ಕ್ರ.ಸಂ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಗ್ರೂಪ್–ಎ | 1 ಹುದ್ದೆ |
| 2 | ಗ್ರೂಪ್–ಬಿ | 1 ಹುದ್ದೆ |
| | ಒಟ್ಟು | 2 ಹುದ್ದೆಗಳು |

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ:6.8.2008 ಸಂಖ್ಯೆ:ಆಇ 1536 ವೆಚ್ಚ–5 2008ರ ಟಿಪ್ಪಣಿಯಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1203

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಇಂಧನ ಸಚಿವಾಲಯ**

**ವಿಷಯ :** ಮೆ:ರಾಜಿ ಗಂಗಾ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕರ್ದ್ಗಾ ಕಿರು ಜಲ ವಿದ್ಯುತ್ ಯೋಜನೆಯನ್ನು 1.5 ಮೆಗ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಇಎನ್ 95 ಎನ್‌ಸಿಇ 2004 ದಿನಾಂಕ:21.4.2006

2 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಕರ್ದ್ಗಾ/2007/2723 ದಿನಾಂಕ:17/19.12.2007

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಮೆ:ರಾಜಿ ಗಂಗಾ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬೆಳಗಾಂ ಜಿಲ್ಲೆಯ ನಿಪ್ಪಾಣಿ ತಾಲ್ಲೂಕಿನ ಕರ್ದ್ಗಾ ಗ್ರಾಮದ ಹತ್ತಿರ ಧೂದಗಂಗಾ ನದಿಗೆ ಅಡ್ಡಲಾಗಿ ಕಟ್ಟಿರುವ ಬ್ಯಾರೇಜ್‌ಗೆ ಹೊಂದಿಕೊಂಡಂತೆ 1.00 ಮೆ.ವ್ಯಾ ಸಾಮರ್ಥ್ಯದ ಕರ್ದ್ಗಾ ಕಿರು ಜಲ; ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಸದರಿ ಸ್ಥಳದಲ್ಲಿ ನೀರಿನ ಎತ್ತರ ಹಾಗೂ ನೀರಿನ ಹರಿವು ವಾಸ್ತವಿಕ ಅಂಶಗಳ ಮೇಲೆ 3 ಮೀಟರ್ ನಿಂದ 5.5 ಮೀಟರ್ ಹಾಗೂ 600 ಕ್ಯುಸೇಕ್ಸ್‌ನಿಂದ 32 ಕ್ಯುಸೇಕ್ಸ್ ಇರುವುದರಿಂದ, ವಿದ್ಯುತ್ ಉತ್ಪಾದನಾ ಸಾಮರ್ಥ್ಯವನ್ನು 1.00 ಮೆಗಾ ವ್ಯಾಟ್‌ನಿಂದ 1.5 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಸರ್ಕಾರಕ್ಕೆ ಶಿಫಾರಸ್ಸ ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಎನ್ 15 ಎನ್ ಸಿಇ 2008, ಬೆಂಗಳೂರು, ದಿನಾಂಕ:26ನೇ ಆಗಸ್ಟ್ 2008**

ಮೆ:ರಾಜಿ ಗಂಗಾ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬೆಳಗಾಂ ಜಿಲ್ಲೆಯ ನಿಪ್ಪಾಣಿ ತಾಲ್ಲೂಕಿನ ಕರ್ದ್ಗಾ ಗ್ರಾಮದ ಹತ್ತಿರ ಧೂದಗಂಗಾ ನದಿಗೆ ಅಡ್ಡಲಾಗಿ ಕಟ್ಟಿರುವ ಬ್ಯಾರೇಜ್‌ಗೆ ಹೊಂದಿಕೊಂಡಂತೆ ಹಂಚಿಕೆ ಮಾಡಲಾದ 1.00 ಮೆ.ವ್ಯಾ ಸಾಮರ್ಥ್ಯದ ಕರ್ದ್ಗಾ ಕಿರು ಜಲ ವಿದ್ಯುತ್ ಯೋಜನಾ ಸಾಮರ್ಥ್ಯವನ್ನು 1.5 ಮೆ.ವ್ಯಾ ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಸರ್ಕಾರದ ಅನುಮತಿ ನೀಡಲಾಗಿದೆ.

ಓದಲಾದ (1)ರ ಸರ್ಕಾರಿ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1239

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ